



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 55

ಸಂಪುಟ: ೦೬ ಸಂಚಿಕೆ: ೫ | ಆಗಸ್ಟ್ ೨೦೧೯ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 06 Issue 5 | August 2019 | Pages - 8 | A. Sub. - Rs. 20/- | Editor : Sri. B.R. Ravindranath



**23–6–2019**

## ಬಿ.ಎಂ.ಶ್ರೀ ಪ್ರತಿಷ್ಠಾನದ ನಲವತ್ತರ ನಲಿವು

**ವಿಚಾರ ಸಂಕಿರಣ**

ಉಪನ್ಯಾಸ : ಡಾ. ಎನ್.ಆರ್.ಲಲಿತಾಂಬ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆಕಾಲೇಜು, ವಿಜಯನಗರ ಬೆಂ.
ವಿಷಯ : ಕನ್ನಡ ಸಂಶೋಧನೆ ಇತ್ತೀಚಿನ ಒಲವುಗಳು
ಉಪನ್ಯಾಸ : ಡಾ.ಸಿ. ನಾಗಭೂಷಣ , ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ ಬೆ.ವಿ.ವಿ.
ವಿಷಯ : ಹಸ್ತಪ್ರತಿಗಳು – ಆಕರ ಸಂಪತ್ತು.
ಅಧ್ಯಕ್ಷತೆ : ಡಾ.ಪಿ.ವಿ.ನಾರಾಯಣ

ಪ್ರಾರಂಭದಲ್ಲಿ ಡಾ.ಆರ್. ಲಕ್ಷ್ಮೀನಾರಾಯಣ ಅವರು ಪ್ರತಿಷ್ಠಾನವು ೪೦ ವರ್ಷಗಳ ಸೇವೆಯನ್ನು ಪೂರೈಸಿರುವ ಸಂಭ್ರಮವನ್ನು ಆಚರಿಸಲು ಈ ವರ್ಷದಲ್ಲಿ ವಿಶೇಷ ವಿಚಾರ ಸಂಕಿರಣಗಳು, ಉಪನ್ಯಾಸಗಳನ್ನು ನಡೆಸುವ ಮತ್ತು ಗ್ರಂಥ ಪ್ರಕಟಣೆಗಳನ್ನು ಕೈಗೊಳ್ಳುವ ಉದ್ದೇಶವಿದೆ ಎಂದು ತಿಳಿಸಿ. ನಲವತ್ತರ ನಲಿವು ಕಾರ್ಯಕ್ರಮಗಳ ಸರಣಿಯ ಆಶಯಗಳನ್ನು ವಿವರಿಸಿದರು.ನಂತರ ಉಪನ್ಯಾಸಕರನ್ನು ಸಭೆಗೆ ಪರಿಚಯ ಮಾಡಿದರು.

ಬಿ.ಎಂ ಶ್ರೀ. ನಲವತ್ತರ ನಲಿವು ಕಾರ್‍ಯಕ್ರಮದಲ್ಲಿ ಕನ್ನಡ ಸಂಶೋಧನೆಯ ಇತ್ತೀಚಿನ ಒಲವುಗಳು ಎಂಬ ವಿಷಯ ಕುರಿತು ಡಾ.ಎನ್. ಆರ್ ಲಲಿತಾಂಬರವರು ಉಪನ್ಯಾಸ ನೀಡಿದರು. ನೂರು ವರ್ಷಗಳಿಗೂ ಮೀರಿದ ಚರಿತ್ರೆಯನ್ನು ಕನ್ನಡ ಸಂಶೋಧನಾ ಕ್ಷೇತ್ರವು ಹೊಂದಿದ್ದು, ಅದು ನಡೆದು ಬಂದ ಹೆಜ್ಜೆ ಗುರುತುಗಳ ಪಕ್ಷಿನೋಟವನ್ನು ನೀಡುತ್ತಾ ಅದು ಕಾಲಕಾಲಕ್ಕೆ ಒಳಗೊಂಡ ಹಲವು ಆಯಾಮಗಳ ಪರಿಚಯವನ್ನು ಮಾಡಿಕೊಟ್ಟರು. ಅಲ್ಲದೆ ೨೧ನೆಯ ಶತಮಾನದ ಈ ಎರಡು ದಶಕಗಳಲ್ಲಿ ಸಂಶೋಧನೆಯ ದೃಷ್ಟಿ ದಿಕ್ಕು ದೆಸೆ, ಕಾಣಿಸಿಕೊಳ್ಳುತ್ತಿರುವ ಹೊಸ ಒಲವುಗಳು ಯಾವುವು ಎಂಬುದನ್ನು ಕುರಿತು ತಿಳಿಸಿಕೊಟ್ಟರು. ಆರಂಭಕಾಲದ ಆಕರ ಸಂಗ್ರಹ, ಸಂಪಾದನೆ, ಪ್ರಕಟಣೆ, ಮತ್ತು ವಸಾಹತುಶಾಹಿ ನಿಷ್ಠ ಅಧ್ಯಯನದ ಮಾದರಿಗಳು ನಂತರದ ಕಾಲದಲ್ಲಿ ಕಾಣಿಸಿಕೊಂಡ ಅಖಿಲಭಾರತೀಯ ನೆಲೆಯ ಮತ್ತು ಪ್ರಾಂತೀಯ ನೆಲೆಯ ಚಾರಿತ್ರಿಕ, ಸಾಂಸ್ಕೃತಿಕ ಶೋಧಗಳು ಆರಂಭಿಕ ವಿದ್ವತ್ ವಲಯದಿಂದ ನಡೆದುದನ್ನು ಗುರುತಿಸಿದರು. ವಿಶ್ವವಿದ್ಯಾಲಯದ ಆರಂಭ ಕಾಲದ ಪ್ರಕಾರ ನಿಷ್ಠ, ಲೇಖಕ ಕೇಂದ್ರಿತ, ಪಠ್ಯ ಕೇಂದ್ರಿತ, ತೌಲನಿಕ ಅಧ್ಯಯನದ ಮಾದರಿಗಳ ಬಗೆಗೆ ಸ್ಥೂಲ ಪರಿಚಯ ಮಾಡಿಕೊಟ್ಟರು. ೭೦ರ ದಶಕದ ನಂತರದಲ್ಲಿ ಕನ್ನಡ ಸಾಹಿತ್ಯದ ದಿಕ್ಕು ದೆಸೆಗಳು ಪಲ್ಲಟಗೊಂಡಂತೆ ಸಾಹಿತ್ಯ, ಸಂಸ್ಕೃತಿಯನ್ನು ನೋಡುವ ದೃಷ್ಟಿಕೋನಗಳು ಬದಲಾಗತೊಡಗಿದ್ದರಿಂದ ಸಂಶೋಧನಾ ಕ್ಷೇತ್ರದಲ್ಲಿಯೂ ವ್ಯಾಪಕವಾದ ಬದಲಾವಣೆ ಕಾಣಿಸಿಕೊಂಡು, ಅನೇಕ ಹೊಸ ಪರಿಕಲ್ಪನಾತ್ಮಕ ಅಧ್ಯಯನಗಳು ಆರಂಭಗೊಂಡುದನ್ನು ಉದಾಹರಣೆಗಳ ಮೂಲಕ ತಿಳಿಸಿಕೊಟ್ಟರು.

ಈ ಅಧ್ಯಯನಗಳು ಕೇವಲ ಸಂಶೋಧನಾ ಪ್ರಕ್ರಿಯೆಯಾಗದೆ ಸಂಶೋಧನೆಯ ಉತ್ಪನ್ನವೂ ಆಗುವುದರಿಂದ ಅಭಿವೃದ್ಧಿ ಯೋಜನೆಗಳನ್ನು ರೂಪಿಸುವಲ್ಲಿಯೂ ಸಹಕಾರಿಯಾಗಬೇಕೆಂಬ ಕಾರಣಕ್ಕೆ, ಸಂಶೋಧನೆಗೆ ಇರಬೇಕಾದ ಒಂದು ಸಾಮಾಜಿಕ ಬದ್ಧತೆಯ ಬಗೆಗೂ ಗಮನನೀಡಲಾಗುತ್ತಿದೆ. ತಿರಸ್ಕೃತ ಜ್ಞಾನಪರಂಪರೆಗಳ ಬೇರುಗಳನ್ನು, ಕಂಡುಕೊಳ್ಳುವ ಜರೂರನ್ನು ದೇಸೀ ಸಂಶೋಧನೆಗಳು ಎತ್ತಿಕೊಳ್ಳುತ್ತಿವೆ ಎಂಬುದನ್ನು ಅನೇಕ ಉದಾಹರಣೆಗಳೊಂದಿಗೆ ವಿವರಿಸಿದರು.




೫ನೇ ಪುಟಕ್ಕೆ

## ಅವಲೋಕನ

ಓಲೆಗರಿಗಳ ಸಿರಿಯಲ್ಲಿ (ಗ್ರಂಥ ಸಂಪಾದನಾ ಲೇಖನಗಳ ಸಂಗ್ರಹ)
ಲೇಖಕಿ : ಡಾ. ವೈ.ಸಿ. ಭಾನುಮತಿ
ಪ್ರಕಾಶಕರು : ಸಂವಹನ,
೧೨/೧ಎ, ಈರ್ವಿನ್ ಬಜಾರ್ ಹಿಂಭಾಗ,
ಶಿವರಾಂ ಪೇಟೆ, ಮೈಸೂರು-೫೭೦೦೦೧
ಪುಟ- ೨೨೮ , ರೂ. ೧೮೦/-
ಮೊದಲ ಮುದ್ರಣ-ಇಸವಿ ೨೦೧೮
- ಪ್ರೊ. ಜಿ. ಅಶ್ವತ್ಥನಾರಾಯಣ

ಕನ್ನಡದಲ್ಲಿ ಗ್ರಂಥಸಂಪಾದನಾ ಕಾರ್ಯ ೧೯ನೇ ಶತಮಾನದಲ್ಲಿ ಪ್ರಾರಂಭವಾದರೂ ೨೦ನೇ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದು ಹಲವಾರು ವಿದ್ವಾಂಸರು ಈ ಕ್ಷೇತ್ರದಲ್ಲಿ ಅದ್ಭುತ ಸೇವೆ ಸಲ್ಲಿಸಿದ್ದಾರೆ. ಅವರಲ್ಲಿ ಪುರುಷರೇ ಹೆಚ್ಚು ಮಂದಿ, ಮಹಿಳೆಯರು ಕಡಿಮೆ. ಆದರೂ ಗ್ರಂಥ ಸಂಪಾದನಾ ಕ್ಷೇತ್ರಕ್ಕೆ ಅವರು ಕೊಟ್ಟ ಕೊಡುಗೆ. ಪಟ್ಟ ಪರಿಶ್ರಮ ಯಾವ ಪುರುಷ ಗ್ರಂಥ ಸಂಪಾದಕರಿಗಿಂತ ಕಡಿಮೆಯಿಲ್ಲ. ಇಂಥವರ ಪೈಕಿ, ಡಾ.ವೈ.ಸಿ.ಭಾನುಮತಿ ಅವರೊಬ್ಬರು. ವೃತ್ತಿ ಪ್ರವೃತ್ತಿಗಳೆರಡಲ್ಲೂ ಗ್ರಂಥ ಸಂಪಾದನಾ ಕ್ಷೇತ್ರವನ್ನು ಆಯ್ಕೆ ಮಾಡಿಕೊಂಡ ಇವರು ಓಲೆಗರಿಗಳ ನಡುವೆಯೇ ಬಾಳನ್ನು ಸವೆಸಿ ಸುಮಾರು ೪ ದಶಕಗಳ ಪರಿಶ್ರಮದಿಂದ ೩೦ಕ್ಕೂ ಹೆಚ್ಚು ಓಲೆಗರಿ ಗ್ರಂಥಗಳನ್ನು ಶಾಸ್ತ್ರಬದ್ಧವಾಗಿ ಸಂಪಾದಿಸಿದ್ದಾರೆ. ಇದರೊಂದಿಗೆ ಜಾನಪದ ಶಿಶುಸಾಹಿತ್ಯ, ವಿಮರ್ಶೆ ಕ್ಷೇತ್ರದಲ್ಲೂ ಕಾರ್ಯಮಾಡಿದ್ದಾರೆ. ಜೈನಶಾಸ್ತ್ರದಲ್ಲಿ ಇವರ ಪರಿಣಿತಿಗೆ ಇವರ ಮಹಾ ಪ್ರಬಂಧ "ಕನ್ನಡದಲ್ಲಿ ವರ್ಧಮಾನ ಸಾಹಿತ್ಯ" ಗಮನಾರ್ಹ ಸಂಶೋಧನಾ ಕೃತಿಯಾಗಿದೆ. ಈಗ ವಿಮರ್ಶೆಗೆ ಬಂದಿರುವ "ಓಲೆಗರಿಗಳ ಸಿರಿಯಲ್ಲಿ" ಗ್ರಂಥದಲ್ಲಿ ೧೮ ಲೇಖನಗಳಿದ್ದು ನಿವೃತ್ತಿಯ ನಂತರ ಮೂರು ವರ್ಷಗಳಲ್ಲಿ (೨೦೧೪-೨೦೧೭) ರಚಿಸಿ ನಾನಾ ವಿಚಾರ ಸಂಕಿರಣಗಳಲ್ಲಿ ಮಂಡಿಸಿದ ಸಂಪ್ರಬಂಧಗಳಾಗಿವೆ. ಇವುಗಳಲ್ಲಿ ಗ್ರಂಥಗಳಿಗೆ ಸಂಬಂಧಿಸಿದಂತೆ. "ಆದಿಪುರಾಣ ಪರಿಷ್ಕರಣಗಳು; ಹಸ್ತಪ್ರತಿಗಳು: ಸಂಶೋಧನೆಯ ಆಕರಗಳಾಗಿ, ಲೇಖನಗಳು ಪ್ರಮುಖವಾಗಿವೆ. ಆದಿಪುರಾಣ ಪರಿಷ್ಕರಣಗಳು ಲೇಖನದಲ್ಲಿ ಇದುವರೆಗೆ ಆದಿಪುರಾಣವನ್ನು ಹಸ್ತಪ್ರತಿಗಳ ಆಧಾರದ ಮೇಲೆ ಪ್ರಕಟವಾಗಿರುವ ಗ್ರಂಥಗಳನ್ನು ಕುರಿತ ವಿಮರ್ಶೆಯಿದೆ. ಪಾಠಾಂತರಗಳನ್ನು ಒಬ್ಬೊಬ್ಬ ಸಂಪಾದಕರು ಹೇಗೆ ಸ್ವೀಕರಿಸಿದ್ದಾರೆ. ಅವು ಎಷ್ಟರ ಮಟ್ಟಿಗೆ ಮುಂದಿನ ಪರಿಷ್ಕರಣಕಾರರಿಗೆ ಬೆಳಕು ನೀಡಿವೆ ಎಂಬಂಶವನ್ನು ಸೂಕ್ಷ್ಮವಾಗಿ ಚರ್ಚಿಸಿದ್ದಾರೆ. ಎಸ್.ಜಿ.ನರಸಿಂಹಾಚಾರ್ಯ, ಕೆ.ಜಿ ಕುಂದಣಗಾರ, ಎಲ್ ಬಸವರಾಜು, ಟಿ.ವಿ.ವೆಂಕಟಾಚಲಶಾಸ್ತ್ರಿಗಳ ಪರಿಷ್ಕರಣಗಳನ್ನು ವಿಮರ್ಶಿಸುವುದರ ಜತೆಗೆ ೨ ಆದಿಪುರಾಣ ೨ ಗದ್ಯಾನುವಾದಗಳನ್ನು, ಬಿಡಿಪದ್ಯಗಳ ಪರಿಷ್ಕರಣದ ಬಗ್ಗೆ ಬರೆದಿದ್ದಾರೆ. ಆದಿಪುರಾಣದ ಗದ್ಯಾನುವಾದಗಳ ಬಗ್ಗೆ ಎಲ್. ಗುಂಡಪ್ಪನವರ ಆದಿಪುರಾಣ ಸಂಗ್ರಹ ಮಳಿಯ ತಿಮ್ಮಪ್ಪಯ್ಯ ಅವರ ಗದ್ಯಾನುವಾದ ಕುರಿತು ಒಂದೆರಡು ಮಾತುಗಳನ್ನು ಹೇಳಬಹುದಿತ್ತು. ಅದೇನೇ ಇರಲಿ.ಕನ್ನಡದಲ್ಲಿ ಆದಿಪುರಾಣ ಕಾವ್ಯದ ಗ್ರಂಥ ಪರಿಷ್ಕರಣದ ಬಗ್ಗೆ ಸಮಗ್ರ ನೋಟ ನೀಡುವಲ್ಲಿ ಯಶಸ್ವಿಯಾಗಿದೆ. **(ಮುಂದುವರೆಯಲಿದೆ)**

### ಆಗಸ್ಟ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಕಡೆಂಗೊಡ್ಲು ಶಂಕರ ಭಟ್ಟ | ೧-೮-೧೯೦೪ |
| ಎಂ.ಆರ್.ಶ್ರೀನಿವಾಸ ಮೂರ್ತಿ | ೨-೮-೧೮೯೩ |
| ಯಶವಂತ ಚಿತ್ತಾಲ | ೩-೮-೧೯೨೮ |
| ವಿಕೃ ಗೋಕಾಕ್ | ೯-೮-೧೯೦೯ |
| ಕೆ.ಜಿ. ಕುಂದರಗಾರ | ೧೪-೮-೧೮೯೫ |
| ಮಿರ್ಜಿಅಣ್ಣರಾಯ | ೨೫-೮-೧೯೧೮ |

### ಆಗಸ್ಟ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಮಧುರ ಚೆನ್ನ | ೧೫-೮-೧೯೫೩ |
| ಸುರಂ ಎಕ್ಕುಂಡಿ | ೨೦-೮-೧೯೯೫ |
| ತಸು ಶಾಮರಾಯರು | ೨೧-೮-೧೯೯೮ |
| ಕೆ.ಜಿ ಕುಂದಣಗಾರ | ೨೨-೮-೧೯೬೫ |
| ಚನ್ನಪ್ಪ ಉತ್ತಂಗಿ | ೨೮-೮-೧೯೬೨ |

#### ಕಿರು ಪರಿಚಯ

### ಡಾ. ಕೆ.ವೈ. ನಾರಾಯಣ ಸ್ವಾಮಿ

ಡಾ. ಕೆ.ವೈ.ನಾರಾಯಣ ಸ್ವಾಮಿ ಅವರು ಬೆಂಗಳೂರು ಕೇಂದ್ರ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಕರ್ನಾಟಕದ ವಿವಿಧ ಸರ್ಕಾರಿ ಕಾಲೇಜುಗಳಲ್ಲಿ ಅಧ್ಯಾಪಕರಾಗಿ ಮತ್ತು ಪ್ರಾಧ್ಯಾಪಕರಾಗಿ ೨೦ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ. ನಾರಾಯಣ ಸ್ವಾಮಿ ಅವರು ಕವಿ, ನಾಟಕಕಾರ, ವಿಮರ್ಶಕರೆಂದೇ ಖ್ಯಾತರಾಗಿದ್ದಾರೆ. "ಮಲೆಗಳಲ್ಲಿ ಮಧುಮಗಳು" ಮಹಾ ಕಾದಂಬರಿಯನ್ನು ಇವರು ೯ ಗಂಟೆಗಳ ಪ್ರಯೋಗದ ನಾಟಕ ರೂಪಕ್ಕೆ ಪರಿವರ್ತನೆ ಮಾಡಿದ್ದಾರೆ. ಇದುವರೆಗೆ ಹಲವಾರು ಪ್ರದರ್ಶನಗಳನ್ನು ನೀಡಿ, ಇದೊಂದು ಅತ್ಯಂತ ಅಪರೂಪದ ಯಶಸ್ವೀಕೃತಿ ಎಂದು ಖ್ಯಾತಿ ಪಡೆದಿದೆ. ಅವರು ೭ ನಾಟಕಗಳನ್ನೂ ರಚಿಸಿದ್ದಾರೆ. ಇವರ ನಾಟಕಗಳಿಗೆ ಸುಂದರವಾದ ಹಾಡುಗಳನ್ನು ಇವರೇ ರಚಿಸುತ್ತಾರೆ. ಇವರು ಎರಡು ವಿಮರ್ಶಾ ಕೃತಿಗಳು ಹಾಗು ಒಂದು ಕವನ ಸಂಗ್ರಹವನ್ನು ರಚಿಸಿರುತ್ತಾರೆ.

### ಡಾ. ಚಂದ್ರಶೇಖರ ನಂಗಲಿ

ಮೂರು ದಶಕಗಳಿಗೂ ಹೆಚ್ಚು ಕಾಲ ಕರ್ನಾಟಕದ ಸರ್ಕಾರಿ ಕಾಲೇಜುಗಳಲ್ಲಿ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಪ್ರಿನ್ಸಿಪಾಲರಾಗಿ ಸಾರ್ಥಕ ಸೇವೆ ಸಲ್ಲಿಸುತ್ತಿದ್ದಾರೆ. ಮಾರ್ಕ್ಸ್‌ವಾದಿ ವಿಮರ್ಶೆ, ನಾ ನಿಲ್ಲುವಳಲ್ಲ, ಆಲಿಸಯ್ಯ ಮಲೆಯ ಕವಿ, ಕಾಡು-ತೋಪು, ನಿರ್ಬೀಜೀಕರಣದ ವಿರಾಟ್ ಸ್ವರೂಪ ಇವರ ಕಲವು ಕೃತಿಗಳು. ಇವರು ಪರಿಸರಕ್ಕೆ ಸಂಬಂಧಿಸಿದಂತೆ ಹಲವಾರು ಕೃತಿಗಳನ್ನು ರಚಿಸಿರುತ್ತಾರೆ. ರಾಜ್ಯ ಸಾಹಿತ್ಯ ಅಕಾದೆಮಿಯ ಪುಸ್ತಕ ಬಹುಮಾನ ಹಾಗೂ ಜಿ.ಎಸ್.ಎಸ್. ವಿಮರ್ಶಾ ಪ್ರಶಸ್ತಿಗಳು ಅವರಿಗೆ ದೊರೆತಿವೆ.

### ಡಾ. ಟಿ.ಎನ್. ವಾಸುದೇವ ಮೂರ್ತಿ

ಡಾ. ವಾಸುದೇವ ಮೂರ್ತಿಯವರು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಎಂ.ಎ.ಪದವಿಯನ್ನು ಪ್ರಥಮ ದರ್ಜೆಯಲ್ಲಿ ಪಡೆದು ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ೨೦೦೮ರಲ್ಲಿ ಪಿಎಚ್.ಡಿ. ಪಡೆದಿದ್ದಾರೆ.
ನ್ಯಾಷನಲ್ ಕಾಲೇಜು, ಆಚಾರ್ಯ ಪಾಠಶಾಲಾಮೊದಲಾದ ಸಂಸ್ಥೆಗಳಲ್ಲಿ ಸ್ನಾತಕೋತ್ತರ ಕೇಂದ್ರಗಳಲ್ಲಿ ಕನ್ನಡ ಅಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ.ಪ್ರತಿಷ್ಠಿತ ವ್ಯಾಲ್ಯೂಪಾಯಿಂಟ್ ನಾಲೆಡ್ಜ್ ವರ್ಕ್ಸ್‌ನಲ್ಲಿ ಭಾಷಾಂತರಕಾರರಾಗಿ ಕೆಲಸ ಮಾಡಿದ್ದಾರೆ. ಪ್ರಜಾವಾಣಿ, ಡೆಕ್ಕನ್ ಹೆರಾಲ್ಡ್, ಪತ್ರಿಕೆಗಳಲ್ಲಿ ಕಾರ್ಯನಿರ್ವಹಿಸಿದ್ದಾರೆ. ಪ್ರಸ್ತುತ ಜ್ಯೋತಿನಿವಾಸ್ ಕಾಲೇಜಿನಲ್ಲಿ ಅಧ್ಯಾಪಕರಾಗಿ ಕೆಲಸ ಮಾಡುತ್ತಿದ್ದಾರೆ. ಇವರು ನಾಲ್ಕು ಕೃತಿಗಳನ್ನು ರಚಿಸಿರುತ್ತಾರೆ.

### ಡಾ. ಬಿ.ಸಿ. ನಾಗೇಂದ್ರ ಕುಮಾರ್

ಕನ್ನಡ ಸಹಪ್ರಾಧ್ಯಾಪಕರು ಮತ್ತು ಸಂಚಾಲಕರು ಕನ್ನಡ ಸ್ನಾತಕೋತ್ತರ ಅಧ್ಯಯನ ಮತ್ತು ಸಂಶೋಧನಾ ವಿಭಾಗ. ಸರ್ಕಾರಿ ಕಲಾಕಾಲೇಜು ಬೆಂಗಳೂರು. ೨೭ ವರ್ಷಗಳಿಂದ ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಸೇವೆ. ೫ ವರ್ಷಗಳಿಂದ ಸರ್ಕಾರಿ ಕಲಾ ಕಾಲೇಜು ಬೆಂಗಳೂರು ಇಲ್ಲಿನ ಸ್ನಾತಕೋತ್ತರ ವಿಭಾಗದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಹಲವಾರು ಪತ್ರಿಕೆ/ ನಿಯತಕಾಲಿಕೆಗಳಲ್ಲಿ ವಿಮರ್ಶೆ ಚಿಂತನೆಗಳು ಪ್ರಕಟವಾಗಿವೆ.
ಹಲವಾರು ರಾಷ್ಟ್ರ-ರಾಷ್ಟ್ರೀಯ ಮಟ್ಟದ ವಿಚಾರ ಸಂಕಿರಣಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಭಾಗಿಯಾಗಿರುತ್ತಾರೆ.

# ಆಗಸ್ಟ್ ೨೦೧೯ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ

**ದಿನಾಂಕ : ೭–೮–೨೦೧೯ ಬುಧವಾರ ಸಂಜೆ– ೬–೩೦ ಕ್ಕೆ**

**ಸಾಕ್ಷ್ಯ ಚಿತ್ರ**

ವಿಶ್ವವಿಖ್ಯಾತ ನಾಟಕಕಾರ ಷೇಕ್ಸ್ ಪಿಯರ್ ಬಗ್ಗೆ (ಆಂಗ್ಲ ಭಾಷೆಯಲ್ಲಿ)

**೧೧–೮–೨೦೧೯ನೇ ಭಾನುವಾರ ಬೆಳಿಗ್ಗೆ ೧೦.೩೦ ಗಂಟೆಗೆ**

ರಾಷ್ಟ್ರ ಕವಿಗಳ ಸಾಹಿತ್ಯ ಮಂಥನ–ಸರಣಿ ವಿಚಾರ ಸಂಕಿರಣ–೩

ರಾಷ್ಟ್ರಕವಿ ಜಿ. ಎಸ್. ಶಿವರುದ್ರಪ್ಪ ಟ್ರಸ್ಟ್ ಹಾಗೂ ಬಿ. ಎಂ. ಶ್ರೀ ಪ್ರತಿಷ್ಠಾನ ಸಹಯೋಗದ ಕಾರ್ಯಕ್ರಮ

**ರಾಷ್ಟ್ರಕವಿ ಜಿ. ಎಸ್. ಶಿವರುದ್ರಪ್ಪನವರ ಸಾಹಿತ್ಯ ಮಂಥನ**

ಉದ್ಘಾಟನೆ : **ಪ್ರೊ. ಎಸ್.ಜಿ. ಸಿದ್ಧರಾಮಯ್ಯ**

ಅಧ್ಯಕ್ಷರು, ಕನ್ನಡಅಭಿವೃದ್ಧಿ ಪ್ರಾಧಿಕಾರ ಮತ್ತುಅಧ್ಯಕ್ಷರು, ಜಿ.ಎಸ್.ಎಸ್.ಟ್ರಸ್ಟ್.

ಅಧ್ಯಕ್ಷತೆ

**ಡಾ. ಆರ್. ಲಕ್ಷ್ಮೀನಾರಾಯಣ**

ಅಧ್ಯಕ್ಷರು, ಬಿ.ಎಂ.ಶ್ರೀ ಪ್ರತಿಷ್ಠಾನ

ಗೋಷ್ಠಿ–1

ಅಧ್ಯಕ್ಷತೆ : **ಡಾ.ಎಚ್. ಎಸ್. ವೆಂಕಟೇಶ ಮೂರ್ತಿ**

ಖ್ಯಾತ ಕವಿಗಳು

ಪ್ರಬಂಧ ಮಂಡನೆ : **ಡಾ. ಎಲ್. ಜಿ. ಮೀರಾ**

ಕನ್ನಡ ಪ್ರಾಧ್ಯಾಪಕರು, ಮಹಾರಾಣಿ ಕಲಾ ಕಾಲೇಜು, ಬೆಂಗಳೂರು.

ವಿಷಯ : ಡಾ. ಜಿ. ಎಸ್. ಎಸ್. ಅವರ ಕಾವ್ಯ.

ಪ್ರಬಂಧಮಂಡನೆ : ಡಾ. ಎಚ್.ದಂಡಪ್ಪ

ಕರ್ನಾಟಕ ಸಾಹಿತ್ಯ ಅಕಾಡೆಮಿ ಸದಸ್ಯರು

ವಿಷಯ : ಜಿ. ಎಸ್. ಎಸ್. ಅವರ ವಿಮರ್ಶೆ ಮತ್ತು ಕಾವ್ಯಮೀಮಾಂಸೆ ಕುರಿತ ಚಿಂತನೆಗಳು.

ಪ್ರಬಂಧ ಮಂಡನೆ : ಡಾ. ಬೈರಮಂಗಲ ರಾಮೇಗೌಡ

ನಿವೃತ್ತ ಕನ್ನಡ ಪ್ರಾಧ್ಯಾಪಕರು,

ವಿಷಯ : **ಜಿ.ಎಸ್.ಎಸ್. ಅವರ ಇತರೆ ಗದ್ಯ ಬರಹಗಳು**

ಭೋಜನದ ವಿರಾಮ 1–30ರಿಂದ 2–00ಗಂಟೆಯವರೆಗೆ

ಕವಿಗೋಷ್ಠಿ ಮತ್ತು ಸಮಾರೋಪ

**ಭಾಗವಹಿಸುವ ಕವಿಗಳು :**

ಶ್ರೀ ಚಿಂತಾಮಣಿಕೊಡ್ಲೆಕೆರೆ, ಶ್ರೀಮತಿ ಎಂ.ಆರ್. ಕಮಲ, ಶ್ರೀ ಮಹಾಬಲಮೂರ್ತಿಕೊಡ್ಲೆಕೆರೆ
ಶ್ರೀಮತಿ ಲಲಿತಾ ಸಿದ್ಧಬಸವಯ್ಯ, ಡಾ.ಟಿ. ಯಲಪ್ಪ, ಡಾ. ಎಚ್.ಎಲ್. ಪುಷ್ಪ, ಶ್ರೀ ಲಕ್ಷ್ಮೀಪತಿಕೋಲಾರ, ಡಾ. ವಿಜಯಾ ಸುಬ್ಬರಾಜ್

**ದಿನಾಂಕ :೧೯–೦೮–೨೦೧೯ ಸೋಮವಾರ ಸಂಜೆ : ೬–೦೦ ಗಂಟೆಗೆ**

ನುಡಿಯಾರಾಧಕರ ಸ್ಮರಣೆ ಕಾರ್ಯಕ್ರಮ

ದೇ. ಜವರೇಗೌಡ, ಟಿಪಿ ಕೈಲಾಸಂ, ಆಲೂರ ವೆಂಕಟರಾಯರು, ರಂ ಶ್ರೀ ಮುಗಳಿ, ಬಿಎಲ್‌ರೈಸ್, ಶಾಂತಿನಾಥ ದೇಸಾಯಿ, ಜಿ.ಬಿ. ಜೋಶಿ, ಮಧುರ ಚೆನ್ನ, ನಿರುಪಮಾ, ತ್ರಿವೇಣಿ, ಪಿಕ್ರಿನ್ ಅವರುಗಳ ಬದುಕು ಬರಹಗಳ ಬಗ್ಗೆ ವಿಚಾರ ಮಂಡನೆ ಸಾಹಿತ್ಯಾಭಿಮಾನಿಗಳಿಂದ

**ದಿನಾಂಕ ೨೨–೦೮–೨೦೧೯ ಗುರುವಾರ ಸಂಜೆ : ೬–೩೦ ಗಂಟೆಗೆ**

**"ಅಕ್ಕರಗೊಟ್ಟಿ"–೬೩**

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ಟಿಪ್ಪುವಿನ ಮಕ್ಕಳ ಒತ್ತೆ : ಒಂದು ಜಿಜ್ಞಾಸೆ

ಚಾಲನೆ ನೀಡುವವರು : ಡಾ. ಎಸ್.ಎಲ್. ಶ್ರೀನಿವಾಸ ಮೂರ್ತಿ

ಅಧ್ಯಾಪಕರು, ವಿಜಯಾಕಾಲೇಜು



# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

**ಒಂದನೇ ಪುಟದಿಂದ**

ಉಪನ್ಯಾಸ : ಡಾ.ಸಿ. ನಾಗಭೂಷಣ , ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ ಬೆ.ವಿ.ವಿ.

ವಿಷಯ : ಹಸ್ತಪ್ರತಿಗಳು ಆಕರ ಸಂಪತ್ತು.

ಹಸ್ತಪ್ರತಿಗಳನ್ನು ಕಾಪಾಡುವುದು ನಮ್ಮ ಮುಂದಿನ ದೊಡ್ಡ ಸವಾಲು. ಈ ನಿಟ್ಟಿನಲ್ಲಿ ಮುಂದಿನ ಪೀಳಿಗೆಗೂ ಅವುಗಳ ಕುರಿತು ಹೆಚ್ಚಿನ ಅರಿವು ಮೂಡಿಸುವ ಅಗತ್ಯವಿದೆ. ಬಿಎಂಶ್ರೀ ಪ್ರತಿಷ್ಠಾನವು ಪಾರಂಪರಿಕ ರೀತಿಯಲ್ಲಿ ತಾಳೆಗರಿ ಗ್ರಂಥಗಳನ್ನು ಈಗಲೂ ಸಂರಕ್ಷಣೆ ಮಾಡುವ ಮೂಲಕ ಹಾಗೂ ಅವುಗಳನ್ನು ಆಧುನಿಕ ತಂತ್ರಜ್ಞಾನದ ಸಹಾಯದಿಂದ ಡಿಜಿಟಲೀಕರಣಗೊಳಿಸುತ್ತಿರುವ ಅಗತ್ಯತೆಯನ್ನು ಉಲ್ಲೇಖಿಸಿದರು. ಈ ವಿಷಯವನ್ನು ಕುರಿತು ಇಂದಿನ ಪೀಳಿಗೆಗೆ ಜಾಗೃತಿ ಮೂಡಿಸಲು ಇಂತಹ ಉಪನ್ಯಾಸಗಳ ಮತ್ತು ಜಾಗೃತಿ ಶಿಬಿರಗಳು ಹೆಚ್ಚು ಸಹಕಾರಿಯಾಗುವುದೆಂದು ಅಭಿಪ್ರಾಯ/ ವ್ಯಕ್ತಪಡಿಸಿದರು.

ತಾಳೆಗರಿಗಳಲ್ಲಿನ ವೈವಿಧ್ಯತೆ, ಸಂರಕ್ಷಣಾ ಸಾಮಗ್ರಿಗಳು, ಕೊರೆಯುವ ಸಾಧನೆಗಳು ಅವುಗಳ ತಯಾರಿಕೆ, ಸಿದ್ಧತೆ ಮುಂತಾದವು ಸಾಮಗ್ರಿಗಳ ವಿಪುಲ ಅಧ್ಯಯನಕ್ಕೆ ಎಡೆಮಾಡಿಕೊಡುವ ರೀತಿಯನ್ನು ವಿವರಿಸಿದರು. ಬರಹದ ಅಧ್ಯಯನ, ಲಿಪಿಕಾರರ ಅಧ್ಯಯನ, ಸಂಗ್ರಹಕಾರರ ಅಧ್ಯಯನ, ಸಾಮಾಜಿಕ ಅಧ್ಯಯನ, ತಾಳೆಗರಿಗಳಲ್ಲಿನ ಪುಷ್ಪಿಕೆಗಳ ಅಧ್ಯಯನಕ್ಕೆ ಎಡೆಮಾಡಿಕೊಡುವ ರೀತಿಯನ್ನು ವಿವರಿಸಿದರು.

ಮುಂದಿನ ದಿನಗಳಲ್ಲಿ ಹಸ್ತಪ್ರತಿ ತಜ್ಞರು ಮತ್ತು ವಿವಿಧ ಜ್ಞಾನ ಶಿಸ್ತುಗಳ ತಜ್ಞರು ಒಟ್ಟುಗೂಡಿ ಗಮನ ಹರಿಸಿದಲ್ಲಿ, ಹಸ್ತಪ್ರತಿ ಕ್ಷೇತ್ರದಲ್ಲಿ ವ್ಯಾಪಕವಾದ ಮತ್ತು ವೈವಿಧ್ಯಮಯವಾದ ಅಧ್ಯಯನಗಳಿಗೆ ಹಸ್ತಪ್ರತಿಗಳೇ ಆಕರವಾಗಬಲ್ಲವು ಎಂದು ಉಪನ್ಯಾಸವನ್ನು ಸಂಪೂರ್ಣಗೊಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಡಾ.ಪಿ.ವಿ.ನಾರಾಯಣ ಅವರು ಬಹಳ ವಿನೋದದ ಧಾಟಿಯಿಂದಲೇ ಭಾಷಣ ಪ್ರಾರಂಭಿಸಿದರು. ಸಂಶೋಧನೆ ಎನ್ನುವುದು. ಮನುಷ್ಯನ ಹುಟ್ಟಿನ ಜೊತೆಯಲ್ಲೇ ಹುಟ್ಟಿಕೊಂಡಿದೆ. ಮನುಷ್ಯನ ಹುಡುಕಾಟದಿಂದಲೇ (ಸಂಶೋಧನೆ) ನಾಗರಿಕತೆ ಬೆಳೆದಿದೆ. ಸಮ್ಯಕ್ ಶೋಧ ಅಂದರೆ ಚೆನ್ನಾಗಿ ಹುಡುಕುವುದು ಎಂದು. ಕಾಲಕ್ಕೆ ತಕ್ಕಂತೆ ಸಂಶೋಧನೆಯ ಪ್ರವೃತ್ತಿಗಳು ಬದಲಾಗುತ್ತ ಬಂದಿವೆ. ನಮ್ಮ ಹಳಗನ್ನಡದಲ್ಲಿರುವ 'ಲೋಕೋಪಕಾರ' ದಂಥ ಪುಸ್ತಕದಲ್ಲಿ ಏನಿದೆ ಎಂದು ಕೊಳ್ಳಲು ಹಳಗನ್ನಡದ ತಿಳಿವಳಿಕೆ ಅಗತ್ಯ. ಕಲೆ ಮತ್ತು ಸಾಹಿತ್ಯ ವಿಷಯಗಳಲ್ಲಿ ತನ್ನ ಪಾಡಿಗೆ ತಾನು ಮನೆಯಲ್ಲೋ ಗ್ರಂಥಾಲಯದಲ್ಲೋ ಕುಳಿತು ಸಂಶೋಧನೆ ಮಾಡಬಹುದು. ಆದರೆ ವಿಜ್ಞಾನದಲ್ಲಿ ಸಂಶೋಧನೆ ಮಾಡಲು ಪ್ರಯೋಗ ಶಾಲೆ ಬೇಕು.ಸರ್ಕಾರ ಪ್ರೋತ್ಸಾಹ ಕೊಡುವುದು ತನಗೆ ಬೇಕಿರುವುದಕ್ಕೆ ಮಾತ್ರ.ಎರಡನೇ ಮಹಾಯುದ್ಧದ ಕಾಲದಲ್ಲಿ ವಿನಾಶಕಾರಿ ಅಸ್ತ್ರಗಳ ಸಂಶೋಧನೆಗೆ ಮಾತ್ರ ಸರ್ಕಾರದ ಪ್ರೋತ್ಸಾಹ ದೊರಕಿತು. ಆಗಲೇ ಐನ್‌ಸ್ಟೀನ್ ಜರ್ಮನಿಯಿಂದ ಅಮೇರಿಕಾಕ್ಕೆ ಹೋದ. ವಿಜ್ಞಾನದಲ್ಲಿ ಸಂಶೋಧನೆಗೆ ಬೆಲೆ ಕಟ್ಟುವುದು ಸುಲಭ. ಸಾಹಿತ್ಯದಲ್ಲಿ ಬೆಲೆ ಕಟ್ಟಲು ಸರಿಯದ ಮಾನದಂಡಗಳಿಲ್ಲ. ಯಾರ್‍ಯಾರಿಗೋ ಯಾವ ಯಾವುದೋ ಕಾರಣಕ್ಕೆ ಪ್ರಶಸ್ತಿ ಬರಬಹುದು. ಸಂಶೋಧನೆ ಎನ್ನುವುದು ದಾರದ ಮೇಲೆ ನಡೆಯುವುದು. ಸಂಶೋಧನೆಗಳೆಲ್ಲ ಬದುಕನ್ನು ಕೇಂದ್ರೀಕರಿಸಿದವು ಎಂದು ಹೇಳಿದರು.

ಡಾ. ವಿಜಯಾಸುಬ್ಬರಾಜ್ ಅವರ ವಂದನಾರ್ಪಣೆಯೊಂದಿಗೆ ವಿಚಾರ ಸಂಕಿರಣ ಸಂಪನ್ನಗೊಂಡಿತು.

**ದಿನಾಂಕ : ೩೦-೬-೨೦೧೯**

## ಗೋವಿಂದ ಜಾಲಿಹಾಳ್ ದತ್ತಿ ಕಾರ್ಯಕ್ರಮ
## ಭಕ್ತಿಗೀತೆಗಳ ಗಾಯನ ಸ್ಪರ್ಧೆ

(೧೩ರಿಂದ ೧೮ನೇ ವಯಮಾನದವರಿಗೆ)

ಶೀ ಗೋವಿಂದ ಜಾಲಿಹಾಳ್ ಅವರು ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ೦೨-೦೮-೧೯೮೧ ರಿಂದ ೧೦-೧೦-೧೯೮೨ರ ವರೆಗೆ ಗೌರವ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿರುತ್ತಾರೆ. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ತತ್ವ ಶಾಸ್ತ್ರದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದರು.ಪ್ರತಿಷ್ಠಾನದಲ್ಲಿ ಜುಲೈ ೨೦೧೩ರಲ್ಲಿ ಭಕ್ತಿಗೀತೆಗಳ ಸಂಗೀತ ಸ್ಪರ್ಧೆ ನಡೆಸುವ ಸಲುವಾಗಿ ಒಂದು ದತ್ತಿ ನಿಧಿಯೊಂದನ್ನು ಸ್ಥಾಪಿಸಿರುತ್ತಾರೆ.

ಪ್ರಾಸ್ತಾವಿಕ ನುಡಿಗಳನ್ನಾಡಿದ ಡಾ. ವಿಜಯಾ ಸುಬ್ಬರಾಜ್ ಅವರು ಸಭೆಗೆ ದತ್ತಿದಾನಿಗಳ ಕುಟುಂಬ ವರ್ಗದವರನ್ನೂ, ತೀರ್ಪುಗಾರರನ್ನು, ಸ್ಪರ್ಧಿಗಳನ್ನೂ ಮತ್ತು ಪೋಷಕರನ್ನೂ ಸ್ವಾಗತಿಸಿದರು. ಸ್ಪರ್ಧೆಗೆ ತೀರ್ಪುಗಾರರಾಗಿದ್ದ ನಾಡಿನ ಖ್ಯಾತ ಶಾಸ್ತ್ರೀಯ ಗಾಯಕರಾದ ಶ್ರೀಮತಿ ಪ್ರಭಾ ಇನಾಂದಾರ್ ಅವರಪರಿಚಯವನ್ನು ಮಾಡಿಕೊಟ್ಟರು.

ಸ್ಪರ್ಧೆಯಲ್ಲಿ೧೭ ಸ್ಪರ್ಧಿಗಳು ಭಾಗವಹಿಸಿದ್ದರು. ತೀರ್ಪುಗಾರರು ಬಹಳ ಶ್ರಮವಹಿಸಿ ಸ್ಪರ್ಧಿಗಳ ಗಾಯನವನ್ನು ತುಲನೆ ಮಾಡಿ ಈ ಕೆಳಕಂಡ ಆರು ಸ್ಪರ್ಧಿಗಳನ್ನು ಬಹುಮಾನಕ್ಕೆ ಆಯ್ಕೆ ಮಾಡಿದರು.

೧. ಪ್ರಥಮ ಬಹುಮಾನ ಅದಿತಿ ಪ್ರಹ್ಲಾದ್‌ರೂ. ೩,೦೦೦/-
೨. ದ್ವಿತೀಯ ಬಹುಮಾನ ಸುನಿಧಿ ಜಿ. ರೂ. ೨,೦೦೦/-
೩. ತೃತೀಯ ಬಹುಮಾನ ಪ್ರಣತಿರಾವ್ ರೂ. ೧,೦೦೦/-

ಜೊತೆಗೆ ಸುಮೇಧ ಆರ್, ಶ್ರೀ ವಿದ್ಯಾ ಮಹೇಶ, ಆಶ್ರೀತ ಎಸ್.



ಇವರುಗಳಿಗೆ ಸಮಾಧಾನಕರ ಬಹುಮಾನಗಳನ್ನು ನೀಡಲಾಯಿತು. ಡಾ. ಪ್ರಭಾ ಇನಾಂದಾರ್ ಅವರು ಸ್ಪರ್ಧಿಗಳಿಗೆ ಹಿತವಚನವನ್ನು ಹೇಳಿ, ಸ್ಪರ್ಧಿಗಳನ್ನೂ ಮತ್ತು ಪೋಷಕರನ್ನೂ ಅಭಿನಂದಿಸಿದರು. ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ಎಲ್ಲರಿಗೂ ವಂದನೆ ಸಲ್ಲಿಸಿದರು.

**ದಿನಾಂಕ : ೧೪-೭-೨೦೧೯**

## ರಾಷ್ಟ್ರ ಕವಿಗಳ ಸಾಹಿತ್ಯ ಮಂಥನ ಸರಣಿ ವಿಚಾರ ಸಂಕಿರಣ ೨
## ಕುವೆಂಪು ಸಾಹಿತ್ಯ ಮಂಥನ

ಉದ್ಘಾಟನೆ : ಡಾ. ಬರಗೂರು ರಾಮಚಂದ್ರಪ್ಪ
ಖ್ಯಾತ ಸಾಹಿತಿಗಳು
ಅಧ್ಯಕ್ಷತೆ : ನಾಡೋಜ ಪ್ರೊ. ಎಂ.ಎಚ್. ಕೃಷ್ಣಯ್ಯ, ಗೌರವಾಧ್ಯಕ್ಷರು
ವಿಚಾರ ಸಂಕಿರಣ
ಗೋಷ್ಠಿ: ೧
ಪ್ರಬಂಧ ಮಂಡನೆ : ಡಾ.ಟಿ.ಎನ್. ವಾಸುದೇವ ಮೂರ್ತಿ
ವಿಷಯ : ಕುವೆಂಪು ಕಾವ್ಯದರ್ಶನ
ಪ್ರಬಂಧ ಮಂಡನೆ : ಡಾ. ಕೆ. ವೈ.ನಾರಾಯಣ ಸ್ವಾಮಿ
ವಿಷಯ : ಕುವೆಂಪು ನಾಟಕ ಲೋಕ
ಅಧ್ಯಕ್ಷತೆ : ಪ್ರೊ. ಎಚ್.ಎಸ್. ರಾಘವೇಂದ್ರರಾವ್, ಖ್ಯಾತ ವಿಮರ್ಶಕರು
ಗೋಷ್ಠಿ ೨
ಪ್ರಬಂಧ ಮಂಡನೆ : ಡಾ. ನಾಗೇಂದ್ರಕುಮಾರ್

ವಿಷಯ : ಕುವೆಂಪು ಅವರ ಕಾದಂಬರಿಗಳನ್ನು ಕುರಿತು

ಪ್ರಬಂಧ ಮಂಡನೆ : ಪ್ರೊ. ಶಾಂತರಾಜು

ವಿಷಯ: ಕುವೆಂಪು ಅವರ ವೈಚಾರಿಕ ಚಿಂತನೆಗಳು

ಪ್ರಬಂಧ ಮಂಡನೆ ಹಾಗೂ ಅಧ್ಯಕ್ಷತೆ : ಪ್ರೊ. ಚಂದ್ರಶೇಖರ ನಂಗಲಿ

ವಿಷಯ : ಕುವೆಂಪು ಅವರ ವಿಮರ್ಶೆ ಮತ್ತು ಕಾವ್ಯ ಮೀಮಾಂಸೆ

೧೪-೦೭-೨೦೧೯ ರಂದು ಶ್ರೀಶೈಲೇಶ್ ಕುಮಾರ್ ಅವರಿಂದ ನಾಡಗೀತೆಯ ಗಾಯನವಾದ ನಂತರದಲ್ಲಿ ಪ್ರತಿಷ್ಠಾನದ ಅಧ್ಯಕ್ಷರಾದ ಡಾ.ಆರ್. ಲಕ್ಷ್ಮೀನಾರಾಯಣ ಅವರು ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ಕುವೆಂಪು ಅವರಿಂದ ಉದ್ಘಾಟಿತವಾದ ಬಿ.ಎಂ.ಶ್ರೀ ಪ್ರತಿಷ್ಠಾನ ೪೦ ವರ್ಷ ಮುಗಿದಿರುವ




ಸಂದರ್ಭದಲ್ಲಿ ಅವರ ಸಾಹಿತ್ಯ ಕುರಿತ ಚರ್ಚೆ ಅತ್ಯಂತ ಔಚಿತ್ಯ ಪೂರ್ಣವಾದ್ದು ಎಂದು ಹೇಳಿ ಸಮಾರಂಭದ ಉದ್ಘಾಟನೆಗಾಗಿ ಆಗಮಿಸಿದ್ದ ಡಾ. ಬರಗೂರು ರಾಮಚಂದ್ರಪ್ಪ ಮತ್ತು ಅಧ್ಯಕ್ಷತೆ ವಹಿಸಿದ್ದ ಪ್ರೊ. ಎಂ.ಎಚ್.ಕೃಷ್ಣಯ್ಯನವರ ಸಾಧನೆಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿ ಎಲ್ಲರನ್ನು ಸ್ವಾಗತಿಸಿದರು.

ರಾಷ್ಟ್ರಕವಿ ಪ್ರಶಸ್ತಿ ಕುರಿತಂತೆ ವಿವಾದವೆದ್ದ ಸಂದರ್ಭದಲ್ಲಿ 'ರಾಷ್ಟ್ರಕವಿ' ಪ್ರಶಸ್ತಿ ಯಾರಿಗೆ ಕೊಡಬೇಕೆಂದು ತೀರ್ಮಾನಿಸಲು ಸರ್ಕಾರ ನೇಮಿಸಿದ್ದ ಸಮಿತಿಯಲ್ಲಿ ಈ ಪ್ರಶಸ್ತಿಯನ್ನೇ ಕೊಡಬಾರದೆಂಬ ಅಭಿಪ್ರಾಯವಿದ್ದವರೂ ಆ ಸಮಿತಿಯಲ್ಲಿದ್ದುದರಿಂದ ರಾಷ್ಟ್ರಕವಿ ಪ್ರಶಸ್ತಿ ಕೊಡುವುದನ್ನೇ ನಿಲ್ಲಿಸಲಾಯಿತು ಎಂದು ಡಾ. ಬರಗೂರು ರಾಮಚಂದ್ರಪ್ಪನವರು ಅಭಿಪ್ರಾಯ ಪಟ್ಟರು. ಅವರು ಕುವೆಂಪು ಅವರ 'ಶೂದ್ರ ತಪಸ್ವಿ' ನಾಟಕ ಕುರಿತಂತೆ ವಿವಾದ ಉಂಟಾದ ಬಗ್ಗೆ ಪ್ರಸ್ತಾಪಿಸಿ ಅದಕ್ಕೆ ಉತ್ತರವಾಗಿ ನಾಟಕದ ಎರಡನೇ ಮುದ್ರಣದ ಸಂದರ್ಭದಲ್ಲಿ 'ಮಾರ್ ನುಡಿ'ಯಲ್ಲಿ ಕುವೆಂಪು ಜಾತಿಯ ಕಾರಣಕ್ಕಾಗಿ ಕುವೆಂಪು ಅವರು ಭಜಕರಿಗೆ ಮತ್ತು ಭಂಜಕರಿಬ್ಬರಿಗೂ ಅನ್ವಯವಾಗುವಂತೆ ವ್ಯಂಗ್ಯವಾಗಿ ಉತ್ತರಿಸಿದ್ದಾರೆ ಎಂದರು.ಅವರ ನಾಡಗೀತೆ ಏಕಕಾಲಕ್ಕೆ ಒಕ್ಕೂಟ ವ್ಯವಸ್ಥೆಗೆ ಪೂರಕವಾಗಿದ್ದು ರಾಜ್ಯಗಳ ಪ್ರಾಧಾನ್ಯವನ್ನು ಎತ್ತಿಹಿಡಿಯುತ್ತದೆ ಎಂದರು. ನವ್ಯದ ಉತ್ತುಂಗ ಕಾಲದಲ್ಲಿ ಕುವೆಂಪು ಮಹಾಕವಿಯೆ, ಅವರ ರಾಮಾಯಣ ದರ್ಶನ ಮಹಾಕಾವ್ಯವೆ ಎಂಬ ಬಗ್ಗೆ ತೀವ್ರ ಚರ್ಚೆಗಳು ಪ್ರಾರಂಭವಾದವು. ಕೆಲವರು ಅವರನ್ನು ಮಹಾಕಾದಂಬರಿಕಾರ ಎಂದರೇ ಹೊರತು ಮಹಾಕವಿ ಎಂದು ಒಪ್ಪಲಿಲ್ಲ. ಭಂಜಕರು ಮತ್ತು ಭಜಕರ ನಡುವೆ ಕುವೆಂಪು ಅವರಿಗೆ ಸಿಗಬೇಕಾದಷ್ಟು ಸಾಹಿತ್ಯಿಕ ನ್ಯಾಯ, ವಿಮರ್ಶೆಯ ನ್ಯಾಯ ದೊರೆಯಲಿಲ್ಲ ಎಂದರು. ಶೂದ್ರ ತಪಸ್ವಿ ನಾಟಕದ ನೆವ ಮಾಡಿಕೊಂಡು ಅವರನ್ನು ಬ್ರಾಹ್ಮಣ ವಿರೋಧಿ ಎಂದು ಜರಿದರು. ಆದರೆ ಕುವೆಂಪು ವಸಾಹತು ಶಾಹಿ ವಿರೋಧಿಯಾಗಿದ್ದಂತೆಯೇ ವರ್ಣಾಶ್ರಮದ ವಿರೋಧಿಯಾಗಿದ್ದರು, ತಪಸ್ಸು, ತಪಸ್ವಿ ಯಾವುದೋ ಒಂದು ಜಾತಿಗೆ ಸೀಮಿತವಾದ ಹಕ್ಕಲ್ಲ ಎಲ್ಲರ ಹಕ್ಕು ಎಂದು ಪ್ರತಿಪಾದಿಸಿದರು. ಕುವೆಂಪು ಅವರು ಜಾತೀಯತೆ, ಮತಮೌಢ್ಯ ಧಾರ್ಮಿಕ ಶೋಷಣೆಗಳ ಕುರಿತು ವ್ಯಕ್ತ ಪಡಿಸಿದ ವಿಚಾರಗಳು ಎಲ್ಲ ಕಾಲಕ್ಕೂ ಪ್ರಸ್ತುತ ಎಂದರು.

ಅಧ್ಯಕ್ಷತೆ ವಹಿಸಿದ್ದ ಪ್ರೊ.ಎಂ. ಹೆಚ್. ಕೃಷ್ಣಯ್ಯನವರು ಕುವೆಂಪು ಅವರ ಕಾವ್ಯದ ಸಾಲುಗಳನ್ನು ಉಲ್ಲೇಖಿಸಿ ಇವೆಲ್ಲ ಗದ್ಯ, ಇಲ್ಲಿ ಪದ್ಯ ಎಲ್ಲಿದೆ ಎಂದು ಕೇಳುತ್ತಿದ್ದ ಕಾಲವಿತ್ತು. ಆದರೆ ಆ ಸಾಲುಗಳೆಲ್ಲ ಇಂದು ಮಂತ್ರದಂತಾಗಿವೆ. ವಿಮರ್ಶೆ ಯಾವಾಗಲೂ ಕಾಲದ ಸಂದರ್ಭಕ್ಕೆ ಸಿಮಿತವಾದುದು, ಆದರೆ ಸೃಜನಶಿಲ ಕೃತಿ ಹಾಗಲ್ಲ, ಮೈಸೂರಿನಲ್ಲಿ ತಾವು ವಿದ್ಯಾರ್ಥಿಗಳಾಗಿದ್ದಾಗ ದಾಸ್ ಪ್ರಕಾಶ್ ಹೋಟೆಲ್ ನಲ್ಲಿ ನಡೆಯುತ್ತಿದ್ದ ಚರ್ಚೆಗಳು ಕುವೆಂಪು ಟೀಕೆಗೇ ಮೀಸಲಾಗಿರುತ್ತಿದ್ದುವು ಎಂದರು. ಮಹಾಕಾವ್ಯದ ಕಾಲ ಮುಗಿಯಿತು ಎಂದು ಹೇಳುವಾಗ ಇವರು ಮಹಾಕಾವ್ಯ ರಚಿಸಿದರು.ಡಾ. ವಿಜಯಾ ಸುಬ್ಬರಾಜ್ ಅವರ ವಂದನಾರ್ಪಣೆಯೊಂದಿಗೆ ಉದ್ಘಾಟನಾ ಉದ್ಘಾಟನಾ ಗೋಷ್ಠಿ ಮುಕ್ತಾಯವಾಯಿತು.

ಪ್ರೊ.ರಾಘವೇಂದ್ರ ರಾವ್ ಅಧ್ಯಕ್ಷತೆಯಲ್ಲಿ ನಡೆದ ಎರಡನೇ ಗೋಷ್ಠಿಯಲ್ಲಿ ಡಾ. ಕೆ.ವೈ ನಾರಾಯಣಸ್ವಾಮಿಯವರು ಕುವೆಂಪು ನಾಟಕಲೋಕದ ಬಗ್ಗೆ ಮಾತನಾಡುತ್ತ ಕುವೆಂಪು ಅವರ ಸಾಮಾಜಿಕ ನಾಟಕಗಳಲ್ಲಿ ಸಾಮಾಜಿಕ ಸಮಾನತೆಯ ತತ್ವಗಳು ಬೀಜರೂಪದಲ್ಲಿರುತ್ತಿದ್ದುವು. ನಾಟಕದ ಪ್ರಯೋಗ ಆಧರಿಸಿ ನಾಟಕ ವಿಮರ್ಶೆ ಮಾಡಬೇಕು. ನಾಟಕ ವಿಮರ್ಶೆಗೆ ನಾಟಕದ್ದೇ ಆದ ಪರಿಭಾಷೆ ಇರಬೇಕು. ಆದರೆ ಕಾವ್ಯದ ಪರಿಭಾಷೆಯನ್ನೇ ಇಟ್ಟುಕೊಂಡು ಕನ್ನಡದಲ್ಲಿ ನಾಟಕದ ವಿಮರ್ಶೆ ಮಾಡಲಾಗುತ್ತಿದೆ. ಕುವೆಂಪು ನಾಟಕದ ವಸ್ತು ಮತ್ತು ಪ್ರತಿರೋಧಗಳು ಅನಂತ ಸಾಧ್ಯತೆಗಳನ್ನು ಹೊಂದಿವೆ. ಗ್ರೀಕ್ ನಾಟಕಗಳ ಮೂರು ಐಕ್ಯಗಳನ್ನು ಇವು ಮೀರುತ್ತವೆ. 'ಶ್ಮಶಾನ ಕುರುಕ್ಷೇತ್ರ' ನಾಟಕದ ರಂಗ ಸಾಧ್ಯತೆಗಳ ಬಗ್ಗೆಯೂ ಸರಿಯಾಗಿ ಪರಿಶೀಲನೆ ನಡೆದಿಲ್ಲ. ಅವರು ಮನೊರಂಗಭೂಮಿಯ ಮಾತು ಬಳಸುತ್ತಾರೆ. ಅದರ ಅಡಿ ಟಿಪ್ಪಣಿಯಲ್ಲಿ ಯಾರಾದರೂ ರಂಗಸಾಹಸಿಗರು ಈ ಕೃತಿಯನ್ನು ರಂಗದ ಮೇಲೆ ತರಬೇಕು ಎಂಬ ಮಾತನ್ನು ಆಗಲೇ ಹೇಳಿದ್ದರು. ವಿಸ್ತಾರವಾಗಿ ನಾಟಕಗಳ ಬಗ್ಗೆ ಮಾತನಾಡಿದರು.

ಅಧ್ಯಕ್ಷತೆ ವಹಿಸಿದ್ದ ಪ್ರೊ.ಎಚ್.ಎಸ್. ರಾಘವೇಂದ್ರರಾವ್ ಅವರು ಮಾತನಾಡುತ್ತ– ಕುವೆಂಪು ಕಾವ್ಯದಲ್ಲಿ ಒಂದು ಸಾಲು ಕಾವ್ಯ ತೋರಿಸಿ ನೋಡೋಣ ಎಂದು ಹೇಳುತ್ತಿದ್ದವರೇ ಆ ಮೇಲೆ ಕುವೆಂಪು ಆರಾಧಕರಾದದ್ದನ್ನು ನೊಡಿದ್ದೇನೆ. ಕುವೆಂಪು ಅವರು ಸಾಹಿತ್ಯ ಸೃಷ್ಟಿಗೆ ನಡೆಸಿದ ಆಯ್ಕೆ, ತರ್ಕ, ದರ್ಶನಗಳ ಬಗ್ಗೆ ಇನ್ನಷ್ಟು ಯೋಚಿಸಬೇಕಾಗಿದೆ ಎಂದರು. ಕುವೆಂಪು ಅವರ ಓದುಗ ಲೋಕವು ಕುವೆಂಪು ಅವರನ್ನು ಭಾವಗೀತಕಾರ, ನಾಟಕಕಾರ ಎಂದು ಪರಿಗಣಿಸದೆ ಅವರು ಒಬ್ಬ ಕಾದಂಬರಿಕಾರ ಎಂದು ಮಾತ್ರ ಗುರುತಿಸುವಂಥ ಪರಿಸ್ಥಿತಿ ನಿರ್ಮಿಸಲಾಯಿತು. ಕುವೆಂಪು ಅವರ ಕೋಗಿಲೆ ಸೋವಿಯಟ್ ರಷ್ಯಾ, ಪಾಂಚಜನ್ಯದ ಬಗ್ಗೆ ಮಾತನಾಡಿದ ಹಾಗೆ ಅಗ್ನಿಹಂಸ ಕಲಾಸುಂದರಿಗಳ ಬಗ್ಗೆ ಮಾತನಾಡುವುದು ಬಹಳ ಕಡಿಮೆ. ಕುವೆಂಪುಗೆ ಸಮಾಜದರ್ಶನ, ಸಂಬಂಧ ದರ್ಶನ, ಲೋಕದರ್ಶನದಷ್ಟೇ ಆತ್ಮದರ್ಶನ ಕೂಡ ಮುಖ್ಯ.ಅವರು ಅರವಿಂದ, ವಿವೇಕಾನಂದ, ಗಾಧಿ, ಪರಮಹಂಸರನ್ನು ಒಳಗೊಂಡ ಬಗೆಯಾವುದು ಇವುಗಳ ಚರ್ಚೆ ಅಗತ್ಯ ಎಂದರು.

ಎರಡನೆಯ ಗೋಷ್ಠಿಯಲ್ಲಿ ಡಾ. ಬಿ.ಸಿ ನಾಗೇಂದ್ರ ಕುಮಾರ್ ಅವರು ಕುವೆಂಪು ಕಾದಂಬರಿಗಳ 'ಹೆಣ್ಣು ಓದು(=ಹೆಣ್ಣೋದು)' ಎಂಬ ವಿಷಯದ ಬಗ್ಗೆ ತಮ್ಮ ವಿಚಾರಗಳನ್ನು ಮಂಡಿಸಿದರು. ಕುವೆಂಪು ಬರೆದ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಈ ಎರಡೂ ಕಾದಂಬರಿಗಳು





ಸ್ತ್ರೀ ಪ್ರಧಾನ ಶೀರ್ಷಿಕೆಗಳನ್ನು ಹೊಂದಿವೆ. ಹೆಣ್ಣಿನ ಪಾತ್ರವನ್ನು ಸಂರಚಿಸುವಾಗ ಅವಳ ಒಳತೋಟಿಗಳನ್ನು ವಿವರಿಸುವಾಗ ಪ್ರಜ್ಞಾ ಪ್ರವಾಹ ತಂತ್ರ ಅಳವಡಿಸಿಕೊಳ್ಳುತ್ತಾರೆ. ಕುವೆಂಪು ರಾಮಾಯಣ ದರ್ಶನದಲ್ಲಿ ಕೈಕೆಯ ಪಾತ್ರ ನಿರ್ಮಿತಿಯಲ್ಲಿ ಅತ್ಯಂತ ಭಾವುಕವಾಗಿ ಕೈಕೆಯ ತಂದೆ ಅವಳನ್ನು ಹೇಗೆ ಕರುಣೆಯಿಂದ ನೋಡಿದ ಎಂದು ಚಿತ್ರಿಸುತ್ತಾರೆ. ಕವಿಯ ಚಿಂತನ ಕ್ರಮ ಸ್ಥಾವರ ರೀತಿಯದ್ದಲ್ಲ, ಜಂಗಮ ರೀತಿಯದ್ದು. ಸ್ಥಾವರವೂ ಜಂಗಮ ರೀತಿಯದು ಎಂಬ ಮಾತು ಬರುತ್ತದೆ. ಹೆಣ್ಣೋದು ಅಂದರೆ ಅಹಂ ಅನ್ನು ನೀಗಿಕೊಳ್ಳುವ ಕ್ರಮ. ಮನೆಯ ತಪಸ್ವಿನಿ ಊರ್ಮಿಳೆಯಂಥ ಪಾತ್ರ ಚಿತ್ರಿಸಿದ ಕವಿ ಕುವೆಂಪುಗೆ ಇದು ಸಾಧ್ಯವಾದ್ದು ಹೇಗೆ ಎಂದರೆ ಜೀವನ ತತ್ವವನ್ನು ಗ್ರಹಿಸುವ ರೀತಿಯಿಂದ.ಈ ಎರಡೂ ಕಾದಂಬರಿಗಳಲ್ಲಿ ಹೆಣ್ಣು ಚಿತ್ರಿತವಾಗಿರುವ ರೀತಿಯೇ ತುಂಬ ವಿಶಿಷ್ಟವಾದ್ದು. ಸೃಜನಶೀಲ ಬರಹಗಾರರಾಗಿ ಅತ್ಯಂತ ಕ್ರಾಂತಿಕಾರಿಯಾಗಿ ಕಾಣಿಸುವ ಕುವೆಂಪು ಅದೇ ವಿಮರ್ಶಕರಾಗಿ ಅಮೃತಮತಿಯದು ಕಾಮವಿಕಾರ ಎಂದು ಹೇ ಸಂಬಂಧಗಳ ಬಗ್ಗೆ ಹೇಳುತ್ತ ಸ್ತ್ರೀ ಪಾತ್ರಗಳು ಚಿತ್ರಿತವಾಗಿರುವ ಪರಿಯನ್ನು ವಿಸ್ತಾರವಾಗಿ ತೆರೆದಿಡುತ್ತಾರೆ ಕುವೆಂಪು ನಿಜಕ್ಕೂ ಕಾಲಾತೀತ ಲೇಖಕ ಎಂದರು.

ಕುವೆಂಪು ವೈಚಾರಿಕ ಚಿಂತನೆಗಳು ಕುರಿತು ಮಾತನಾಡಿದ ಪ್ರೊ. ಶಾಂತರಾಜು ಅವರು ವೈಚಾರಿಕತೆ  ವೈಜ್ಞಾನಿಕತೆ, ಮೌಢ್ಯತೆ ಮತ್ತು  ಬದ್ಧತೆ ಇವುಗಳ ಹಿನ್ನೆಲೆಯಲ್ಲಿ ಅವರ 'ಆತ್ಮ ಶ್ರೀಗಾಗಿ ನಿರಂಕುಶ ಮತಿಗಳಾಗಿ' ಬರೆದ ನಲವತ್ತೆರಡು ವರ್ಷಗಳ ನಂತರದಲ್ಲಿ ಬರೆದ 'ವಿಚಾರ ಕ್ರಾಂತಿಗೆ ಆಹ್ವಾನ', ಹಾಗೂ ಅವರ ಆತ್ಮಕಥೆಯಾದ 'ನೆನಪಿನ ದೋಣಿಯಲ್ಲಿ' ಕೃತಿಗಳನ್ನು ಇಟ್ಟುಕೊಂಡು ಕುವೆಂಪು ವೈಚಾರಿಕತೆಯನ್ನು ನೋಡಬೇಕು ಎಂದರು. ಈಗ ಇರುವ ಸ್ಥಿತಿಯಿಂದ ಇನ್ನೊಂದು ಸ್ಥಿತಿಯನ್ನು ತಲುಪುವುದು, ಹಾಗೂ ಸ್ವಚ್ಛಂದ ಮತಿಯ ಸ್ವಾತಂತ್ರ್ಯವೇ ವೈಚಾರಿಕತೆ. ಅವರ ಸೃಜನಶೀಲ ಕೃತಿಗಳಲ್ಲೂ ವೈಚಾರಿಕತೆ ಬೇಕಾದ ಹಾಗೆ ಇದೆ. ಅವರ ಕಥಾ ಸಂಗ್ರಹಗಳಲ್ಲಿಯ ಕಥೆಗಳು ಕೂಡ  ನೀವು ನೋಡಬೇಕಾದ ದಿಕ್ಕು ಬದಲಾಯಿಸಿಕೊಳ್ಳಿ ಎಂದು. ವೈಚಾರಿಕ ಚಿಂತನೆ ಇಲ್ಲದ ಅವರ ಯಾವ ಬರಹವೂ ಇಲ್ಲ. ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು, ಅಂದಾಯಿತು ಓರ್ರೋರ್ವರ ಕಾಲ , ಇದು ಸರ್ವರ ಕಾಲ'  ಈ ಮುಂತಾದ ಬರಹಗಳಲ್ಲಿ ವೈಚಾರಿಕತೆಯನ್ನು ಸೃಜನಶೀಲವಾಗಿ ಕಟ್ಟಿಕೊಡುವುದನ್ನು ನೋಡುತ್ತೇವೆ ಎಂದು ಹಲವು ನಿದರ್ಶನಗಳ ಮೂಲಕ ಉದ್ಬೋಧಕ ಮಾತುಗಳನ್ನಾಡಿದರು.

ನಂತರ ಅಧ್ಯಕ್ಷತೆ ವಹಿಸಿದ್ದ ಚಂದ್ರಶೇಖರ ನಂಗಲಿಯವರು ಮಾತನಾಡಿ ಮಾನವನ ಕಣ್ಣಳತೆ ೧೮೦ ಡಿಗ್ರಿ ಯಾದರೆ ಕುವೆಂಪು ಅವರಂಥ ಸೃಜನಶೀಲ ಲೇಖಕರದು ೩೬೦ ಡಿಗ್ರಿ.  ಕುವೆಂಪು ಕೃತಿಗಳದು ಕೇವಲ, ಸಸ್ಯ ಕೇಂದ್ರಿತ ನೆಲೆಯಾಗಲಿ, ಪ್ರಾಣಿಕೇಂದ್ರಿತ ನೆಲೆಯಾಗಲಿ, ಸಮಾಜ ಕೇಂದ್ರಿತ ನೆಲೆಯಾಗಲಿ ಅಲ್ಲ; ಅವುಗಳದು ಒಟ್ಟಾರೆ ಜೀವ ಕೇಂದ್ರಿತ ನೆಲೆ. ಅವರು ಅಜ್ಜೀಸಾಬು, ಲುಂಗೀಸಾಬು ಮುಂತಾದ ಕ್ರೂರಿ, ವಂಚಕರನ್ನಷ್ಟೇ ಚಿತ್ರಿಸಿಲ್ಲ; ಕರೀಮ್ ಸಾಬರಂಥ ಮಾನವೀಯ ಪಾತ್ರವನ್ನೂ ಚಿತ್ರಿಸಿದ್ದಾರೆ ಎಂದೆಲ್ಲ ವಿಸ್ತಾರವಾಗಿ ಕುವೆಂಪು ಸಾಹಿತ್ಯ ಲೋಕವನ್ನು ತೆರೆದಿಟ್ಟರು.

ಗೋಷ್ಠಿಗಳ ನಿರ್ವಹಣೆಯನ್ನು ಶ್ರೀ ಗುರುಪ್ರಸಾದ್ ಅವರು ಮಾಡಿದರು. ಗೌರವ ಕಾರ್ಯದರ್ಶಿ ರವೀಂದ್ರನಾಥ್ ಅವರು ವಂದನಾರ್ಪಣೆ ಮಾಡಿದರು.

## ದಿನಾಂಕ : ೧೭–೦೭–೨೦೧೯

## ಗಿರೀಶ್ ಕಾರ್ನಾಡ್ ಅವರ ಸಂಸ್ಮರಣಾ ಕಾರ್ಯಕ್ರಮ

ಉಪನ್ಯಾಸ : ಪ್ರೊ. ಎಂ.ಎಸ್. ರಘುನಾಥ ನಿವೃತ್ತ ಪ್ರಾಧ್ಯಾಪಕರು.

ವಿಷಯ : ಗಿರೀಶ್ ಕಾರ್ನಾಡರ ಐತಿಹಾಸಿಕ ನಾಟಕಗಳು



ಜ್ಞಾನಪೀಠ ಪುರಸ್ಕೃತ ಗಿರೀಶ್ ಕಾರ್ನಾಡ್ ಅವರು ೧೦ನೇ ಜೂನ್ ೨೦೧೯ ರಂದು ವಿಧಿವಶರಾದರು. ಸಾಮಾನ್ಯವಾಗಿ ಶ್ರದ್ಧಾಂಜಲಿ ಅಥವಾ ನುಡಿನಮನ ಸಭೆ ಮಾಡುವ ಮೂಲಕ ನಮ್ಮ ಗೌರವನ್ನು ಅರ್ಪಿಸುವ ಬದಲಾಗಿ, ಅವರ ಐತಿಹಾಸಿಕ ನಾಟಕಗಳ ಬಗ್ಗೆ ಒಂದು ಉಪನ್ಯಾಸದ ಮೂಲಕ ಶ್ರದ್ಧಾಂಜಲಿ ಅರ್ಪಿಸುವುದು ಅರ್ಥಪೂರ್ಣವೆನಿಸಿ, ಈ ಕಾರ್ಯಕ್ರಮವನ್ನು ಆಯೋಜಿಸಲಾಗಿದೆ ಎಂದು ತಿಳಿಸಿ ರವೀಂದ್ರನಾಥ್ ಅವರು ಎಲ್ಲರನ್ನೂ ಸ್ವಾಗತಿಸಿದರು.  ಕರ್ನಾಟಕದ ಹಲವಾರು ಕಾಲೇಜುಗಳಲ್ಲಿ ಉಪನ್ಯಾಸಕರಾಗಿ, ಪ್ರಾಧ್ಯಾಪಕರಾಗಿ ಮತ್ತು ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿರುವ ಪ್ರೊ.ಎಂ.ಎಸ್. ರಘುನಾಥ್ ಅವರನ್ನು ಡಾ.ಆರ್.ಲಕ್ಷ್ಮೀನಾರಾಯಣ ಪರಿಚಯಿಸಿದರು.ನಂತರ ಗಿರೀಶ್ ಕಾರ್ನಾಡರ ಅಭಿಮಾನಿಗಳನ್ನೂ ಮತ್ತು ಸಭಿಕರನ್ನು ಹೃತ್ಪೂರ್ವಕವಾಗಿ ಸಭೆಗೆ ಸ್ವಾಗತಿಸಿದರು. ಬಹುಮುಖ ಪ್ರತಿಭೆಯ ಕಾರ್ನಾಡ್ ಅವರು ಶ್ರೇಷ್ಠ ಭಾರತೀಯ ನಟ, ಚಿತ್ರ ನಿರ್ದೇಶಕರು ಇಂಗ್ಲೀಷ್ ಮತ್ತು ಕನ್ನಡದ ಸಾಹಿತಿಗಳು, ನಾಟಕಕಾರ ಮತ್ತು ರಂಗಕರ್ಮಿಯೂ ಆಗಿದ್ದರು. ಬ್ರೆಕ್ಟ್, ಚಕ್ರವರ್ತಿ ರಾಜಗೋಪಾಲಚಾರಿ, ರವೀಂದ್ರನಾಥ್ ಟ್ಯಾಗೋರ್ ಮತ್ತು ಕೀರ್ತಿನಾಥ ಕುರ್ತುಕೋಟಿ ಅವರಿಂದ ಪ್ರಭಾವಗೊಂಡಿದ್ದರು. ಕಾರ್ನಾಡ್ ಅವರು ಹದಿನಾಲ್ಕು ನಾಟಕಗಳನ್ನು  ರಚಿಸಿದ್ದಾರೆ. ಅವರ ನಾಟಕಗಳಿಗೆ ಪುರಾಣ, ಇತಿಹಾಸ ಮತ್ತು ಜಾನಪದಗಳೇ ಮೂಲವಸ್ತುವಾಗಿದ್ದವು.

ತುಘಲಕ್ ನಾಟಕಕ್ಕೆ ಗಿರೀಶ್ ಕಾರ್ನಾಡ್ ಅವರು ಮೊದಲು "ಎರಡು ರಾಜ್ಯಗಳ ನಡುವೆ" ಎಂಬ ಹೆಸರನ್ನು ನೀಡಿದ್ದರು. ಕುರ್ತುಕೋಟಿಯವರ ಸಲಹೆ ಮೇರೆಗೆ "ತುಘಲಕ್" ಎಂದು ಮರು ನಾಮಕರಣವಾದ ಬಗೆಗಿನ ಚರ್ಚೆ, ಚಿಂತನೆಗಳನ್ನು  ಸ್ವಾರಸ್ಯಕರವಾಗಿ ಬಣ್ಣಿಸಿದರು. "ತುಘಲಕ್" ನಾಟಕ ಹಿಂದೂಗಳಿಂದಲೂ ಬಹುವಿಶ್ವಾಸಗಳಿಸಿದ ನಾಟಕವಾಯಿತು. ತುಘಲಕನದು ಉದಾತ್ತ ಪಾತ್ರವಾಗಿದ್ದು ಪಾತ್ರ ಇತರ ಪಾತ್ರಗಳು ಶ್ರೇಷ್ಠವಾಗಿದ್ದವು. ತುಘಲಕ್ ನಾಟಕ ಕಂಡ ಯಶಸ್ಸಿನಿಂದ ಪ್ರಭಾವಿತರಾಗಿ, ಕಾರ್ನಾಡರು "ಟಿಪ್ಪು ಸುಲ್ತಾನನ ಕನಸುಗಳು ಎಂಬ ಐತಿಹಾಸಿಕ ನಾಟಕವನ್ನು ರಚಿಸಲು ಮುಂದಾದರು. ಟಿಪ್ಪು ಕಂಡ ಕನಸುಗಳನ್ನು ತಾನೇ ದಾಖಲಿಸುತ್ತಿದ್ದ ರೀತಿಯೇ ವಿಶೇಷ. ಅವನ ಕನಸುಗಳನ್ನೇ ಮೂಲಾಧಾರವಾಗಿ ಇರಿಸಿಕೊಂಡು ಕರ್ನಾಟಕವನ್ನು ರಚಿಸಲಾಗಿತ್ತು. ಕಾರ್ನಾಡರ ಐತಿಹಾಸಿಕ ನಾಟಕಗಳ ಬಗ್ಗೆ ವಿಚಾರ ಪೂರ್ಣ ಉಪನ್ಯಾಸ ಕೇಳಿದ ಶ್ರೀ ರಘುನಾಥ ಅವರ ಕೆಲವು ವಿದ್ಯಾರ್ಥಿಗಳಾದ ಶ್ರೀ ವೆಂಕಟರಮಣಭಾರತಿ, ಶ್ರೀ ಸಂಜೀವಕುಮಾರ್ ಹಾಗೂ ರವೀಂದ್ರ ಅವರುಗಳು ಹಾಜರಿದ್ದು ಅವರನ್ನು ಸನ್ಮಾನಿಸಿದರು. ಡಾ. ವಿಜಯಾಸುಬ್ಬರಾಜ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

## ದಿ: ೧೯.೬.೨೦೧೯

## ಸಾಹಿತ್ಯ ಸಂಚಲನ – ೧೧

ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ  ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ

ಶ್ರೀಮತಿ. ಸಾಯಿಲಕ್ಷ್ಮಿ – ನಿವೃತ್ತ ಸಹಾಯಕ ನಿರ್ದೇಶಕಿ – ಆಕಾಶವಾಣಿ, ಬೆಂಗಳೂರು

ವಿಷಯ: 'ಗರಿ ಬಿಚ್ಚಿದ ಬಾನಾಡಿಗಳ ಒಡನಾಡಿಯಾಗಿ ಬಾನುಲಿ'
ಸ್ಥಳ: ಎಂವಿಸೀ ಸಭಾಂಗಣ

ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ಆಕಾಶವಾಣಿಯ ಕಾರ್ಯಕ್ರಮಗಳ ಕೊಡುಗೆ ಎಷ್ಟು ಎಂದು ಸವಿವರವಾದ ಉಪನ್ಯಾಸ ನೀಡಿದವರು ಆಕಾಶವಾಣಿಯ ನಿವೃತ್ತ ಸಹಾಯಕ ನಿರ್ದೇಶಕಿ ಶ್ರೀಮತಿ.ಸಾಯಿಲಕ್ಷ್ಮಿಯವರು. ಕರ್ನಾಟಕ ಲೇಖಕಿಯರ ಸಂಘ ಬಿಎಂಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ ಪ್ರತಿ ತಿಂಗಳೂ ಏರ್ಪಡಿಸುತ್ತಿರುವ ಸಾಹಿತ್ಯ ಸಂಚಲನ ಸರಣಿ ಕಾರ್ಯಕ್ರಮದ ಹನ್ನೆರಡನೆಯ ಕಾರ್ಯಕ್ರಮದಲ್ಲಿ ತಮ್ಮ ವೃತ್ತಿ ಬದುಕಿನ ನಂಟಿರುವ 'ಗರಿ ಬಿಚ್ಚಿದ ಬಾನಾಡಿಗಳ ಒಡನಾಡಿಯಾಗಿ ಬಾನುಲಿ' ಎನ್ನುವ ವಿಷಯವನ್ನೇ ಆಯ್ಕೆ ಮಾಡಿಕೊಂಡಿದ್ದರು. ಆಕಾಶವಾಣಿಯ ಮಕ್ಕಳ ಕಾರ್ಯಕ್ರಮಗಳ ಸಂಯೋಜನೆಯ ಪರಿಯನ್ನು ಎಳೆಎಳೆಯಾಗಿ ಸಭಿಕರ ಮುಂದೆ ಬಿಚ್ಚಿಟ್ಟು, ಆ ಸಮಯದಲ್ಲಿ ತಮಗಾದ ವಿಶಿಷ್ಟ ಅನುಭವಗಳನ್ನು ಹಂಚಿಕೊಂಡರು. ಮಕ್ಕಳಿಂದ ಕಾರ್ಯಕ್ರಮ ರೂಪಿಸುವಾಗ ಮಕ್ಕಳಾಗಿ ಅವರ ಜೊತೆ ಬೆರೆತು, ನಿಲಯದ ಶಿಸ್ತಿನ ಬಗ್ಗೆ ತಿಳಿವಳಿಕೆ ನೀಡಿ, ಕಾರ್ಯಕ್ರಮಕ್ಕೆ ಅಗತ್ಯವಾದ ವಿಷಯಗಳನ್ನು ಕಲಿಸಿ, ಅವರಿಂದ ಒಂದರ್ಧ ಗಂಟೆ ಕಾರ್ಯಕ್ರಮ




ಸಂಯೋಜಿಸುವುದರ ಹಿಂದಿರುವ ಶ್ರಮ ಎಷ್ಟೆಂದು ವಿವರಿಸಿದರು.ನಿವೃತ್ತಿಯ ನಂತರವೂ ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡಿರುವ ಸಾಯಿಲಕ್ಷ್ಮಿಯವರು ತಮ್ಮ ಕೆಲವು ರಚನೆಗಳನ್ನು ಪ್ರಕಟಿಸುವ ಉತ್ಸಾಹ ತೋರಿದರು.

ಅನಂತರ ಪ್ರಸಿದ್ಧ ಸಾಹಿತಿ ಪ್ರತಿಭಾ ನಂದಕುಮಾರ್‌ರವರ ಅಧ್ಯಕ್ಷತೆಯಲ್ಲಿ ಜರುಗಿದ ಕವಿಗೋಷ್ಠಿಯಲ್ಲಿ ಹನ್ನೆರಡು ಜನ ಕವಯತ್ರಿಯರು ಭಾಗವಹಿಸಿದರು. ಕವನಗಳ ಸಾಲುಗಳನ್ನು ಎರಡು ಬಾರಿ ವಾಚಿಸುವುದು ಸರಿಯಲ್ಲವೆಂಬ ಅಭಿಪ್ರಾಯ ವ್ಯಕ್ತಪಡಿಸಿದರು.ಕವಯತ್ರಿಯರು ಪ್ರಸ್ತುತ ೨೦೧೯ರ ಭಾಷೆಯನ್ನು ಬಳಸಿ, ಈಗಿನ ವಿಚಾರಗಳನ್ನು ಮೂಡಿಸಬೇಕು.ಲೇಖಕಿಯರು ಸಮಯಕ್ಕೆ ತಕ್ಕಂತೆ ಧ್ವನಿ ಎತ್ತದಿದ್ದರೆ, ಭಾಷೆ ಬಳಸಿಕೊಂಡಿಲ್ಲ ಎನ್ನುವ ಆಕ್ಷೇಪಣೆಗೆ ಗುರಿಯಾಗುತ್ತಾರೆ. ಕವಯತ್ರಿಯರು ಬಹಳ ಉತ್ಸಾಹದಿಂದ ಸ್ವರಚಿತ ಕವನಗಳನ್ನು ಉತ್ತಮವಾಗಿ ವಾಚಿಸಿದರು. ಅಧ್ಯಕ್ಷತೆ ವಹಿಸಿದ್ದ ಕರ್ನಾಟಕ ಲೇಖಕಿಯರ ಸಂಘದ ವನಮಾಲಾ ಸಂಪನ್ನ ಕುಮಾರರವರು ಒಂದು ವರ್ಷದ ಕಾಲ ಒಂದು ತಿಂಗಳೂ ತಪ್ಪದಂತೆ ಅನೇಕ ಉಪಯುಕ್ತ ವಿಷಯಗಳ ಬಗ್ಗೆ ಉಪನ್ಯಾಸ ಕಾರ್ಯಕ್ರಮಗಳು ಜರುಗಿದ್ದು ತಮಗೂ, ತಮ್ಮ ಪದಾಧಿಕಾರಿಗಳಿಗೂ ತೃಪ್ತಿ ನೀಡಿದೆ. ಸಂಘದ ಸದಸ್ಯರಿಗೆ ಅನೇಕ ವಿಷಯಗಳನ್ನು ತಿಳಿದುಕೊಳ್ಳಲು ಸಾಧ್ಯವಾಗಿದೆ. ಅಂದಿನ ಕಾರ್ಯಕ್ರಮದ ಯಶಸ್ಸಿಗೆ ಕಾರಣರಾದ ಮುಖ್ಯ ಅತಿಥಿಗಳನ್ನು ಹಾಗೂ ಕವಯತ್ರಿಯರನ್ನು ಅಭಿನಂದಿಸಿದರು.

ಕಾರ್ಯಕ್ರಮದ ನಿರೂಪಣೆಯನ್ನು ಸಹ ಕಾರ್ಯದರ್ಶಿ ಜಿ.ವಿ.ನಿರ್ಮಲ ನಿರ್ವಹಿಸಿ, ಸಾಯಿಲಕ್ಷ್ಮಿಯವರ ಪರಿಚಯ ಮಾಡಿಕೊಟ್ಟರು. ಪ್ರತಿಭಾ ನಂದಕುಮಾರ್‌ರವರ ಪರಿಚಯವನ್ನು ಸಂಘದ ಸದಸ್ಯೆ ಸವಿತಾ ನಾಗೇಶ್ ಮಾಡಿಕೊಟ್ಟರು. ಸಂಘದ ಉಪಾಧ್ಯಕ್ಷೆ ಡಾ.ಜ್ಯೋತಿ ಶಶಿಕುಮಾರ್‌ರವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

## ೧೦-೭-೨೦೧೯
## "ಅಕ್ಕರಗೊಟ್ಟಿ"-೫೪
## ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ



ವಿಷಯ: ಬಂಗಾರದ ಖರೀದಿ ಮಾಡಲು ಇದು ಸೂಕ್ತ ಸಮಯವೆ?
ಚಾಲನೆ ನೀಡಿದವರು: ಶ್ರೀ ಬಿ.ಆರ್. ರವೀಂದ್ರನಾಥ್

ಮೊದಲಿಗೆ ಡಾ.ಆರ್.ಲಕ್ಷ್ಮೀನಾರಾಯಣ ಅವರು ಶ್ರೀ ಬಿ.ಆರ್. ರವೀಂದ್ರನಾಥ ಅವರ ಪರಿಚಯ ಮಾಡಿ ಎಲ್ಲರನ್ನೂ ಸ್ವಾಗತಿಸಿದರು.

ಈ ವಿಷಯದ ಬಗ್ಗೆ ಶ್ರೀ ಬಿ.ಆರ್. ರವೀಂದ್ರನಾಥ್ ಅವರು ಈ ಕೆಳಕಂಡ ವಿಷಯಗಳನ್ನು ಸಭೆಯ ಗಮನಕ್ಕೆ ತಂದರು.

* ಬಂಗಾರಕ್ಕೆ ಐದು ಸಾವಿರ ವರ್ಷ ಇತಿಹಾಸವಿದೆ.ಬಂಗಾರಕ್ಕೆ ಹುಟ್ಟಿನಿಂದ ಸಾವಿನವರೆಗೆ ಎಲ್ಲರ ಜೀವನದಲ್ಲಿ ಪ್ರಮುಖ ಪಾತ್ರವಹಿಸುತ್ತದೆ.ಬಂಗಾರವು ನಮ್ಮ ಸಂಸ್ಕೃತಿಯ ಅಂಗವಾಗಿರುತ್ತದೆ.
* ಬಂಗಾರಕ್ಕೆ ಬೇಡಿಕೆ ಉಂಟಾಗಲು ರಾಷ್ಟ್ರಮಟ್ಟದಲ್ಲಿ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿರುತ್ತದೆ.ನಮ್ಮ ದೇಶದಲ್ಲಿ ಬಂಗಾರದ ಉತ್ಪಾದನೆ ಕೇವಲ ೧೦ ಟನ್‌ಗಳಷ್ಟು ಭಾರತವು ಪ್ರತಿ ವರ್ಷ ೮೦೦ ಟನ್ ಬಂಗಾರವನ್ನು ಆಮದು ಮಾಡಿಕೊಳ್ಳುತ್ತಿದೆ.
* ೧೯೨೫ರಲ್ಲಿ ಹತ್ತು ಗ್ರಾಂ ಬಂಗಾರಕ್ಕೆ ರೂ. ೧೮.೭೫ ಬೆಲೆ ಇದ್ದೂ ಇಂದು ಅದರ ಬೆಲೆ ರೂ. ೩೫,೦೦೦/-ವಿರುತ್ತದೆ. ಕಳೆದ ಕೆಲವು ವರ್ಷಗಳಲ್ಲಿ ಹಲವಾರು ದೇಶಗಳು ಹಾಗೂ ಹಲವಾರು ದೇಶಗಳ ಕೇಂದ್ರ ಬ್ಯಾಂಕ್‌ಗಳು ಬಂಗಾರವನ್ನು ಖರೀದಿಸಿರುತ್ತವೆ. ಭಾರತದ ರಿಸರ್ವ್ ಬ್ಯಾಂಕ್ ಸಹ ಕಳೆದ ವರ್ಷಕ್ಕೆ ಟನ್ ಬಂಗಾರವನ್ನು ಖರೀದಿಸಿರುತ್ತದೆ.
* ಶ್ರೀಮಂತ ರಾಷ್ಟ್ರಗಳು ಇದುವರೆಗೆ ಉತ್ಪಾದಿಸಲಾಗಿರುವ ೧೬೨೦೦೦ ಟನ್ ಬಂಗಾರದ ಶೇ ೮೦ರಷ್ಟು ಬಂಗಾರವನ್ನು ಹೊಂದಿದ್ದರೆ ಪ್ರಗತಿ ಶೀಲ ರಾಷ್ಟ್ರಗಳು ಕೇವಲ ಶೇ ೩ರಷ್ಟು ಬಂಗಾರವನ್ನು ಹೊಂದಿರುತ್ತವೆ.
* ಐರೋಪ್ಸ್ ರಾಷ್ಟ್ರಗಳು ವಿದೇಶಿ ವಿನಿಮಯ ನಿಧಿಯಲ್ಲಿ ಕನಿಷ್ಠ ಶೇ ೧೫ರಷ್ಟು ಬಂಗಾರವನ್ನು ಹೊಂದಿರಬೇಕೆಂದು ನಿರ್ಧರಿಸುತ್ತವೆ.
* ನಮ್ಮ ದೇಶದಲ್ಲಿ ೨೨ ಕ್ಯಾರೆಟ್ ಆಭರಣಗಳ ಬಗ್ಗೆ ಹೆಚ್ಚು ಒಲವು ಭಾರತವು ೭೫೦೦ವಸ್ತುಗಳನ್ನು ೧೯೦ ದೇಶಗಳಿಗೆ ರಫ್ತು ಮಾಡಿ ೬೦೦೦ ವಸ್ತುಗಳನ್ನು ೧೪೦ ದೇಶಗಳಿಂದ ಆಮದು ಮಾಡಿಕೊಳ್ಳುತ್ತಿದೆ. ಭಾರತದ ಅಮೂಲ್ಯ ವಿದೇಶಿ ವಿನಿಮಯವನ್ನು ಬಂಗಾರದ ಆಮದಿಗಾಗಿ ಬಳಸಲಾಗುತ್ತಿದೆ.

**ವೈಯಕ್ತಿಕ ಮಟ್ಟದಲ್ಲಿ ಬಂಗಾರದ ಹೂಡಿಕೆ ಉತ್ತಮವಾಗಿದ್ದರೂ ರಾಷ್ಟಮಟ್ಟದಲ್ಲಿ ಬಂಗಾರದ ಖರೀದಿ ಮಾರಕವಾಗುತ್ತದೆ. ಜೊತೆಗೆ ಬಂಗಾರ ಖರೀದಿ ಮಾಡದಿರುವವರ ಮೇಲೆಯೂ ಪರೋಕ್ಷ ಪರಿಣಾಮವಾಗುತ್ತಲಿದೆ. ಇಂತಹ ಸಂದಿಗ್ಧ ಸಂದರ್ಭದಲ್ಲಿ ಭಾರತೀಯ ನಾಗರೀಕರು ದೇಶದ ಆರ್ಥಿಕ ಪ್ರಗತಿಯ ಮೇಲೆ ನಕಾರಾತ್ಮಕ ಪರಿಣಾಮ ಬೀರಬಹುದಾದ ಬಂಗಾರ ಖರೀದಿಯ ಬಗ್ಗೆ ಯಾವ ನಿಲುವು ತಳೆಯಬೇಕು?**

ಈ ಚರ್ಚೆಯಲ್ಲಿ ಡಾ.ಆರ್. ಲಕ್ಷ್ಮೀನಾರಾಯಣ, ಡಾ.ವಿಜಯಾಸುಬ್ಬರಾಜ್, ಶ್ರೀ ಡಿ.ನಂ.ವೆಂಕಟರಮಣಯ್ಯ, ಶ್ರೀ.ಕೆ. ವಿಶ್ವನಾಥ್, ಶ್ರೀಬಿ.ಎಸ್. ಗುರುಪ್ರಸಾದ್, ಶ್ರೀ ವೆಂಕಟರಮಣಭಾರತಿ ಇವರುಗಳು ಭಾಗವಹಿಸಿದ್ದರು. ಡಾ.ವಿಜಯಾಸುಬ್ಬರಾಜ್ ವಂದನಾರ್ಪಣೆ ಮಾಡಿದರು.

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2018-2020
dt. 27-10-2017
Office of Posting: Bangalore PSO, Bangalore 560026
Price :Annual Subscription Rs. 20/-
Date of publishing and Posting : 30-07-2019


# ಕಳೆದ ಆರು ವರ್ಷಗಳಲ್ಲಿ ಬಿಎಂಶ್ರೀ ಪ್ರತಿಷ್ಠಾನದಲ್ಲಿ ಕೈಗೊಂಡ ಹೊಸ ಚಟುವಟಿಕೆಗಳು

| ಚಟುವಟಿಕೆ | ಅವಧಿ |
|---|---|
| ೧. ಹೊಂಗನಸು ಮಾಸಿಕ ವಾರ್ತಾ ಪತ್ರ ಪ್ರಾರಂಭ | ಫೆಬ್ರವರಿ ೨೦೧೪ |
| ೨. ಲೋಚನ ಹೊಸ ರೂಪ ಹಾಗೂ ಬದಲಾವಣೆಗಳು | ೨೦೧೬ |
| ೩. ಪ್ರೊಜೆಕ್ಟರ್ ಅಳವಡಿಕೆ | ೧೬-೬-೨೦೧೫ |
| ೪. ಲಿಫ್ಟ್ ಅಳವಡಿಕೆ | ೧೦-೧-೨೦೧೭ |
| ೫. ಹವಾ ನಿಯಂತ್ರಕಗಳ ಅಳವಡಿಕೆ | ೪-೪-೨೦೧೭ |
| ೬. ಶಾ. ಬಾಲೂರಾವ್ ಮಾತಿನ ಮನೆ ಸ್ಥಾಪನೆ | ೧-೭-೨೦೧೫ |
| ೭. ಗ್ರಂಥಾಲಯ ಪುನರ್ ವಿಂಗಡನೆ | ೨೦೧೭-೨೦೧೮ |
| ೮. ವಚನ ವಿಹಾರ ಚಿತ್ರ ಪ್ರದರ್ಶನ ಸರಣಿ | ೨೯-೬-೨೦೧೫ |
| ೯. ರಂಗ ಸಂವಾದ ಕಾರ್ಯಕ್ರಮ ಸರಣಿ | ೨೭-೮-೨೦೧೬ |
| ೧೦. ಕೃತಿಚಿತ್ರ ಕಾರ್ಯಕ್ರಮ ಸರಣಿ | ೫-೬-೨೦೧೬ |
| ೧೧. ಸಾಹಿತ್ಯ ವಿಹಾರ ಕಾರ್ಯಕ್ರಮ ಸರಣಿ | ೨೧-೩-೨೦೧೮ |
| ೧೨. ಸ್ಥಾಪಿತಗೊಂಡ ಹೊಸ ಪ್ರಶಸ್ತಿಗಳು | |
| ಎ) ಶ್ರೀ ಸಾಹಿತ್ಯ | ೨೩-೩-೨೦೧೪ |
| ಬಿ)ಸೂ.ವೆಂ.ಆರಗ | ೨೬-೫-೨೦೧೨ |
| ಸಿ)ವಿಜಯಾ ಸುಬ್ಬರಾಜ್ ಗಣ್ಯ ಲೇಖಕಿ | ೨೧-೪-೨೦೧೪ |
| ಡಿ)ಶಾ. ಬಾಲೂರಾವ್ ಅನುವಾದ&ಯುವಬರಹಗಾರ | ೧೫-೫-೨೦೧೪ |
| ಇ)ಪ್ರೊ. ಎಲ್.ಎಸ್. ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿ | ೧೩-೩-೨೦೧೭ |
| ಎಫ್) ವಿ ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ | ೧೩-೦೩-೨೦೧೭ |
| **ಸ್ಥಾಪಿತಗೊಂಡ ಹೊಸ ದತ್ತಿಗಳು** | |
| ಎ)ಎಂ.ಕೆ. ಮೋಹನ್ ದೇವ್ ಆಳ್ವ& ಡಾ.ಎಂ.ಕೆ. ಶೈಲಜ ದತ್ತಿ | ೧೧-೧೨-೨೦೧೭(ಹೆಚ್ಚುವರಿ) |
| ಬಿ) ಡಾ.ಎಂ.ಎಲ್. ಲಲಿತಮ್ಮ ದತ್ತಿ | ೧೫-೭-೨೦೧೭ |
| ಸಿ) ಹಾಸ್ಯಬ್ರಹ್ಮ ಟ್ರಸ್ಟ್ ದತ್ತಿ, | |
| ಡಿ) ತೀನಂಶ್ರೀ ದತ್ತಿ | ೧೫-೧೧-೨೦೧೭ |
| ೧೩. ಜಾಲತಾಣ ನವೀಕರಣ | ಮೇ ೨೦೧೫ |
| ೧೪. ಹುಟ್ಟು ಹಬ್ಬದ ಶುಭಾಶಯಗಳನ್ನು ಕಳಿಸುವ ಪದ್ಧತಿ ಪ್ರಾರಂಭ | ೧-೩-೨೦೧೬ |
| ೧೫. ಕನ್ನಡ ಸಂಸ್ಕೃತಿ ದರ್ಶನ ಸಾಕ್ಷ್ಯಚಿತ್ರ ಪ್ರದರ್ಶನ ಸರಣಿ | ೧೫-೪-೨೦೧೫ |
| ೧೬. ಹಳಗನ್ನಡ ತರಗತಿಗಳು | ೨೬-೨-೨೦೧೬ |
| ೧೭. ಎಂ.ಫಿಲ್ ಮತ್ತು ಪಿಎಚ್.ಡಿ | ೨೦೦೩,೨೦೦೪ನೇ ಸಾಲು |
| ೧೮. ಉಚಿತ ಪುಸ್ತಕ ವಿತರಣೆ ಪದ್ಧತಿ ಪ್ರಾರಂಭ | ೪-೬-೨೦೧೭ |
| ೧೯. ಶಾಶ್ವತ ನಿಧಿ ಪುನರ್ ಪ್ರಾರಂಭ | ೧-೨-೨೦೧೫ |
| ೨೦. ಉಪನಿಯಮಗಳ ತಿದ್ದುಪಡಿಗಳು | ೨೦೧೪-೨೦೧೬ |
| ೨೧. ಚುನಾವಣಾ ನಿಯಮಗಳನ್ನು ರೂಪಿಸುವುದು | ೨೦೧೮ |
| ೨೨. ಗಮಕವಾಹಿನಿ ಕಾರ್ಯಕ್ರಮ ಸರಣಿ | ೩-೨-೨೦೧೬ |
| ೨೩. ಗಮಕ ಕಲಾಪರಿಷತ್ತು ಕಚೇರಿಗೆ ಸ್ಥಳಾವಕಾಶ | ೧-೩-೨೦೧೮ |
| ೨೪. ಇತಿಹಾಸ ಅಕಾಡೆಮಿ ಕಚೇರಿಗೆ ಸ್ಥಳಾವಕಾಶ | ೧-೧೨-೨೦೧೭ |
| ೨೫. ಹೂದನಿ ಭಾವಗೀತೆ ಧ್ವನಿ ಸುರಳಿ ಬಿಡುಗಡೆ | ೨೯-೪-೨೦೧೩ |
| ೨೬. ಎಂ.ವಿ.ಸೀ ಶತಮಾನೋತ್ಸವ ಕಾರ್ಯಕ್ರಮ | ೨೬-೪-೨೦೧೩ |
| ೨೭. ಉದಯಭಾನು ಕಲಾ ಸಂಘಕ್ಕೆ೧೦೦೦೧ ಗ್ರಂಥಗಳ ಕೊಡುಗೆ | ೧೪-೯-೨೦೧೩ |
| ೨೮. ಹಸ್ತಪ್ರತಿ ಅಧ್ಯಯನ ಸಮಾವೇಶ | ೮-೧೧-೨೦೧೩ |
| ೨೯. ಪಂಪಭಾರತ, ಸಂಕ್ಷಿಪ್ತ ವಿಕಮಾರ್ಜನ ವಿಜಯ | ೨೩-೧೧-೨೦೧೩ |
| ವಿಶೇಷ ತರಗತಿಗಳು | ೨೧-೪-೨೦೧೪ |
| ೩೦. ಸಾಹಿತ್ಯ ಅಕಾಡೆಮಿವತಿಯಿಂದ ಗ್ರಂಥಗಳ ಪ್ರಕಟಣೆ | ೨೩-೬-೨೦೧೪ |
| ೩೧. ಅಕ್ಕರಗೊಟ್ಟಿ ಕಾರ್ಯಕ್ರಮ ಸರಣಿ | ೧೩-೬-೨೦೧೫ |
| ೩೨. ಕಟ್ಟಡ ನವೀಕರಣ ಹಾಗೂ ಕಾಮಗಾರಿ ಕೆಲಸಗಳು | ೨೦೧೫-೨೦೧೬ |
| ೩೩. ವಾರ್ಷಿಕ ವರದಿಗಳಿಗೆ ಹೊಸ ರೂಪ | ೨೦೧೪ರಿಂದ |
| ೩೪. ಕಾರ್ಯಕ್ರಮ ಹಾಜರಿ ಪುಸ್ತಕ | ೭-೧೨-೨೦೧೮ |
| ೩೫. ಸಾಹಿತ್ಯ ಸಂಚಲನ ಕಾರ್ಯಕ್ರಮ ಸರಣಿ | ೧೮-೭-೨೦೧೮ |
| ೩೬. ಆರ್ಥಿಕ ಸ್ಥಿತಿ ಉತ್ತಮಗೊಂಡಿರುವುದು | ೨೦೧೪ರಿಂದ |
| ೩೭. ತಾಳೆಗರಿ ಸೇವೆ ನೀಡುವುದು | ೨೦೧೭ |
| ೩೮. ಕೆಲವು ವಿಶೇಷ ಕಾರ್ಯಕ್ರಮಗಳು | ೨೦೧೮-೧೯ |
| ೩೯. ಕನ್ನಡ ರಾಜ್ಯೋತ್ಸವ ಕಾರ್ಯಕ್ರಮ | ೨೦೧೭-೧೮ |


**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath


**ಅಚ್ಚಾದ ಪುಸ್ತಕ**

ತೆರೆದ–ಅಂಚೆ

ಶ್ರೀಮತಿ/ಶ್ರೀ..........................................................................................

..........................................................................................

..........................................................................................


ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭